KA / BG-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೫ | ಬೆಂಗಳೂರು, ಗುರುವಾರ, ಜೂನ್ ೨೪, ೨೦೧೦ (ಆಷಾಢ ३, ಶಕ ವರ್ಷ ೧೯೩೨) | ಸಂಚಿಕೆ ೨೫ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ** : ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಯೋಜನೆ ಮತ್ತು ಯೋಜನೇತರ ಅಡಿಯಲ್ಲಿ ಮಂಜೂರಾದ ಹುದ್ದೆಗಳನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ** : ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಇವರ ಪತ್ರ ಸಂಖ್ಯೆ ಕಸನಿ 132 ಸಿಬ್ಬಂದಿ 01:2009–10, ದಿನಾಂಕ : 25.01.2010

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ 25.01.2010ರ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಇವರು ಇಲಾಖೆಯ ಯೋಜನೆ ಮತ್ತು ಯೋಜನೇತರ ಅಡಿಯಲ್ಲಿ ಮಂಜೂರಾದ 88 ತಾತ್ಕಾಲಿಕ ಹುದ್ದೆಗಳನ್ನು ಸರ್ಕಾರಿ ಆದೇಶ ಸಂಖ್ಯೆ ಕಸಂವಾಪ್ರ 54 ಕಸನಿ 2009, ದಿ: 26.06.2009ರ ಆದೇಶದಲ್ಲಿ ದಿನಾಂಕ: 01–04.2009 ರಿಂದ 31–03–2010ರ ರವರೆಗೆ ಮುಂದುವರಿಸಿದ್ದು ಅವಧಿಯು ದಿನಾಂಕ: 31.03.2010ಕ್ಕೆ ಮುಕ್ತಾಯಗೊಳ್ಳುವುದರಿಂದ ಹಾಗೂ ಇಲಾಖೆಯ ಕಾರ್ಯಚಟುವಟಿಕೆಗಳನ್ನು ಸುಗಮವಾಗಿ ನಿರ್ವಹಿಸಲು ಈ ಹುದ್ದೆಗಳನ್ನು ಮುಂದುವರೆಸುವುದು ಅವಶ್ಯಕವಾಗಿರುವುದರಿಂದ ಸದರಿ ಹುದ್ದೆಗಳನ್ನು ದಿನಾಂಕ: 01.04.2010 ರಿಂದ 31.03.2011 ರವರೆಗೆ ಮುಂದುವರೆಸಲು ಕೋರಿರುತ್ತಾರೆ.

ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಯೋಜನೆ ಮತ್ತು ಯೋಜನೇತರ ಅಡಿಯಲ್ಲಿ ಮಂಜೂರಾದ 88 ತಾತ್ಕಾಲಿಕ ಹುದ್ದೆಗಳನ್ನು ದಿನಾಂಕ: 01.04.2010 ರಿಂದ 31.03.2011 ರವರೆಗೆ ಮುಂದುವರೆಸಲು ಸರ್ಕಾರವು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಕಸಂವಾಪ್ರ : 25 ಕಸನಿ 2010, ಬೆಂಗಳೂರು, ದಿನಾಂಕ: 12ನೇ ಏಪ್ರಿಲ್ 2010**

ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಯೋಜನೆ ಮತ್ತು ಯೋಜನೇತರ ಅಡಿಯಲ್ಲಿ ಮಂಜೂರಾದ ಈ ಆದೇಶದ ಅನುಬಂಧದಲ್ಲಿ ತೋರಿಸಿರುವ 88 ತಾತ್ಕಾಲಿಕ ಹುದ್ದೆಗಳನ್ನು 1–4–2010 ರಿಂದ 31–03–2011 ರವರೆಗೆ ಅಂದರೆ ಒಂದು ವರ್ಷದ ಅವಧಿಗೆ ಮುಂದುವರಿಸಲಾಗಿದೆ.

ಈ ಆದೇಶವನ್ನು ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ: ಶಿಇ 159 ಐಎಫ್ಎಸ್ 2010 ದಿನಾಂಕ 03–03–2010 ರಲ್ಲಿ ನೀಡಿರುವ ಸಹಮತಿಯನ್ವಯ

ಹಾಗೂ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ 10–7–96ರಲ್ಲಿ ಇಲಾಖಾ ಕಾರ್ಯದರ್ಶಿ ಅವರಿಗೆ ಪ್ರದತ್ತವಾದ ಅಧಿಕಾರದ ಪ್ರತ್ಯಾಯೋಜನೆಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಎಂ.ಕೆ. ಭರ್ಮರಾಜಪ್ಪ)**

ಸರ್ಕಾರದ ಅಧೀನ ಕಾರ್ಯದರ್ಶಿ

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ

(ಆಡಳಿತ ಕನ್ನಡ)

ಸರ್ಕಾರಿ ಆದೇಶ ಸಂಖ್ಯೆ ಕಸಂವಾಪ್ರ 25 ಕಸನಿ 2010 ದಿನಾಂಕ : 12–04–2010 ಅನುಬಂಧ

| ಕ್ರ. ಸಂ. | ಮಂಜೂರಾದ ಹೊಸ ಘಟಕ/ ಕಾರ್ಯಕ್ರಮಗಳು ಮತ್ತು ಸ್ಥಳ | ಲೆಕ್ಕ ಶೀರ್ಷಿಕೆ | ಹುದ್ದೆಗಳು/ಸಂಖ್ಯೆ | ವೇತನ ಶ್ರೇಣಿ ರೂ. | ವಿಸ್ತರಿಸಿದ ಅವಧಿ |
|---|---|---|---|---|---|
| 1 | 2 | 3 | 4 | 5 | 6 |
| 1. | ದಾವಣಗೆರೆ/ಬಾಗಲಕೋಟೆ/ಗದಗ/ಹಾವೇರಿ/ ಕೊಪ್ಪಳ/ಚಾಮರಾಜನಗರ/ ಉಡುಪಿ– ಒಟ್ಟು 7 ಜಿಲ್ಲೆಗಳು<br>ಸೂಚನೆ: ಮೇಲ್ಕಂಡ ಬೇರಳಚ್ಚುಗಾರರ 7 ಹುದ್ದೆಗಳಲ್ಲಿ ಚಾಮರಾಜನಗರ ಹಾಗೂ ದಾವಣಗೆರೆ ಜಿಲ್ಲೆಗಳಲ್ಲಿನ ಸದರಿ ಹುದ್ದೆಯ<br><br>ಲೆಕ್ಕ ಶೀರ್ಷಿಕೆ 2205–00–001–0–01 (ಯೋಜನೇತರ ಅಡಿಯಲ್ಲಿ) | 2205–00–001–0–01 (ಯೋಜನೇತರ) | ಪ್ರತಿ ಜಿಲ್ಲೆಗೆ:<br>1. ಸಹಾಯಕ ನಿರ್ದೇಶಕರು–1 (ಒಂದು)<br>2. ಬೆರಳಚ್ಚುಗಾರ –1 (ಒಂದು)<br>3. ದಲಾಯಿತ –1 (ಒಂದು) | 11400–21600<br>5800–10500<br>4800–7275 | ದಿನಾಂಕ : 1–4–2010 ರಿಂದ 31–3–2011 ರವರೆವಿಗೆ |
| 2. | ಜಿಲ್ಲಾ ರಂಗಮಂದಿರ:<br>ಚಿಕ್ಕಮಗಳೂರು/ಕೋಲಾರ/ಶಿವಮೊಗ್ಗ/ ತುಮಕೂರು/ಬಳ್ಳಾರಿ/ಬಿಜಾಪುರ/ಉತ್ತರ ಕನ್ನಡ/ರಾಯಚೂರು | 2205–ಕಲೆ ಮತ್ತು ಸಂಸ್ಕೃತಿ 00–001 ನಿರ್ದೇಶನ ಮತ್ತು ಆಡಳಿತ –0–01 ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ (ಯೋಜನೇತರ) | ಪ್ರತಿ ಜಿಲ್ಲೆಗೆ:<br>1. ದ್ವಿತೀಯ ದರ್ಜೆ ಸಹಾಯಕ–1 (ಒಂದು)<br>2. ಸೀನಿಯರ್ ಎಲೆಕ್ಟ್ರಿಷಿಯನ್ ಕಂ ಸೌಂಡ್ ಸೂಪರ್ ವೈಸರ್–1 (ಒಂದು) (ಬಳ್ಳಾರಿ ಜಿಲ್ಲಾ ರಂಗಮಂದಿರ ಹೊರತುಪಡಿಸಿ)<br>3. ಗ್ರೂಪ್ 'ಡಿ' ನೌಕರ –1 (ಒಂದು) (ಬಿಜಾಪುರ ಮತ್ತು ಉ.ಕ. ಜಿಲ್ಲೆಯ ರಂಗಮಂದಿರ ಹುದ್ದೆಗಳನ್ನು ಹೊರತುಪಡಿಸಿ) | 5800–10500<br>8825–16000<br>4800–7275 | ದಿನಾಂಕ: 1–4–2010 ರಿಂದ 31–3–2011 ರವರೆವಿಗೆ |
| 3. | ಮಂಡ್ಯ ಮತ್ತು ಬೆಳಗಾಂ ಜಿಲ್ಲಾ ರಂಗಮಂದಿರ | 2205–00–001–0–01 (ಯೋಜನೇತರ) | ಪ್ರತಿ ಜಿಲ್ಲೆಗೆ:<br>1. ದ್ವಿತೀಯ ದರ್ಜೆ ಸಹಾಯಕ –1 (ಒಂದು)<br>2. ಗ್ರೂಪ್ 'ಡಿ' ನೌಕರ –1 (ಒಂದು) | 5800–10500<br>4800–7275 | ದಿನಾಂಕ: 1–4–2010 ರಿಂದ 31–3–2011 ರವರೆವಿಗೆ |

ಕ್ರಮ ಸಂಖ್ಯೆ (2)4 ಕಾಲಂ (5) ರಲ್ಲಿ ಸೀನಿಯರ್ ಎಲೆಕ್ಟ್ರಿಷಿಯನ್ ಕಂ ಸೌಂಡ್ ಸೂಪರ್‌ವೈಸರ್ ಹುದ್ದೆಯ ವೇತನ ಶ್ರೇಣಿ ಸರ್ಕಾರದ ಆದೇಶ ಸಂಖ್ಯೆ: ಎಫ್.ಡಿ.31 ಎಸ್.ಆರ್.ಪಿ.2007(VIII), ದಿನಾಂಕ: 14–8–2008ರ ಮೇರೆಗೆ ಹಾಲಿ ಇದ್ದ ವೇತನ ಶ್ರೇಣಿ ರೂ. 6,250–12000ರನ್ನು ರೂ. 8825–16000 ಎಂದು ಪರಿಷ್ಕರಿಸಲಾಗಿದೆ. ಅದರಂತೆ ಈ ಹುದ್ದೆ ವೇತನ ಶ್ರೇಣಿಯನ್ನು ಈ ಮೇಲೆ ತೋರಿಸಲಾಗಿದೆ.

| | | | | | |
|---|---|---|---|---|---|
| 4. | ಮುಂದುವರಿದ ಯೋಜನಾ ಕಾರ್ಯಕ್ರಮದಡಿಯಲ್ಲಿ ಮಂಜೂರಾದ ಹುದ್ದೆಗಳು: | 2205–00–102–4–01 (ಯೋಜನೆ) | | | |
| | 1. ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿ | 2205–00–102–4–01 (ಯೋಜನೆ) | ಅಧೀಕ್ಷಕರು –1 (ಒಂದು) | 10000–18150 | ದಿನಾಂಕ: 1–4–2010 ರಿಂದ 31–3–2011 ರವರೆವಿಗೆ (13 ಹುದ್ದೆಗಳು ಮಾತ್ರ) |
| | 2. ಕರ್ನಾಟಕ ಸಾಹಿತ್ಯ ಅಕಾಡೆಮಿ | 2205–00–102–4–01 (ಯೋಜನೆ) | ಅಧೀಕ್ಷಕರು –1 (ಒಂದು) | 10000–18150 | |
| | 3. ಕರ್ನಾಟಕ ಉರ್ದು ಅಕಾಡೆಮಿ | 2205–00–102–4–01 (ಯೋಜನೆ) | ಅಧೀಕ್ಷಕರು –1 (ಒಂದು) | 10000–18150 | |
| | 4. ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ | 2205–00–102–4–01 (ಯೋಜನೆ) | ಅಧೀಕ್ಷಕರು –1 (ಒಂದು) | 10000–18150 | |
| | 5. ಕರ್ನಾಟಕ ನಾಟಕ ಅಕಾಡೆಮಿ<br>6. ಕರ್ನಾಟಕ ಲಲಿತಕಲಾ ಅಕಾಡೆಮಿ | 2205–00–102–4–01 (ಯೋಜನೆ) | ಅಧೀಕ್ಷಕರು –1 (ಒಂದು)<br>ಅಧೀಕ್ಷಕರು –1 (ಒಂದು) | 10000–18150 | |
| | 7. ಕನ್ನಡ ಭವನದ ನಿರ್ದೇಶನ ಮತ್ತು ಆಡಳಿತ | 2205–00–001–0–01 (ಯೋಜನೇತರ) | 1. ಸಹಾಯಕ ಗ್ರಂಥಪಾಲಕ –1 (ಒಂದು)<br>2. ಪ್ರಥಮ ದರ್ಜೆ ಸಹಾಯಕ –1 (ಒಂದು)<br>3. ಹಿರಿಯ ಎಲೆಕ್ಟ್ರಿಷಿಯನ್ ಕಂ ಸೌಂಡ್ ಸೂಪರ್ ವೈಸರ್ –1 (ಒಂದು)<br>4. ಅಟೆಂಡರ್ –1 (ಒಂದು<br>5. ಮಾಲಿ –1 (ಒಂದು)<br>6. ಸ್ವೀಪರ್ –2 (ಎರಡು) | 7275–13350<br>7275–13350<br>8825–16000<br>5200–8200<br>4800–7275<br>4800–7275 | |

ಕ್ರಮ ಸಂಖ್ಯೆ 4ರಡಿ ಉಪ ಕ್ರಮಸಂಖ್ಯೆ 21 ಕಾಲಂ 5ರಲ್ಲಿ ಹಿರಿಯ ಎಲೆಕ್ಟ್ರಿಷಿಯನ್ ಕಂ ಸೌಂಡ್ ಸೂಪರ್‌ವೈಸರ್ ಹುದ್ದೆಯ ವೇತನ ಶ್ರೇಣಿ ಸರ್ಕಾರದ ಆದೇಶ ಸಂಖ್ಯೆ ಎಫ್.ಡಿ.31 ಎಸ್.ಆರ್.ಪಿ 2007(Viii), ದಿನಾಂಕ: 14–8–2008ರ ಮೇರೆಗೆ ಹಾಲಿ ಇದ್ದ ವೇತನ ಶ್ರೇಣಿ ರೂ. 6,250–12000ರನ್ನು ರೂ. 8825–16000 ಎಂದು ಪರಿಷ್ಕರಿಸಲಾಗಿದೆ. ಅದರಂತೆ ಈ ಹುದ್ದೆಯ ವೇತನ ಶ್ರೇಣಿ ಈ ಮೇಲೆ ತೋರಿಸಲಾಗಿದೆ.

| | | | | | |
|---|---|---|---|---|---|
| 5. | 1. ಕೇಂದ್ರ ಕಛೇರಿ | 2205–00–001–0–01<br>(ಯೋಜನೇತರ) | 1. ಕಾರ್ಯಕ್ರಮ ಅಧಿಕಾರಿ – (ಒಂದು)<br>ಜಂಟಿ ನಿರ್ದೇಶಕರು –1 (ಒಂದು)<br>2. ವಾಹನ ಚಾಲಕ –1 (ಒಂದು)<br>3. ಆಡಳಿತಾಧಿಕಾರಿ –1 (ಒಂದು) (ಜಂಟಿ ನಿರ್ದೇಶಕರು)<br>4. ವಾಹನ ಚಾಲಕ –1 (ಒಂದು) (ಕಾರ್ಯಕ್ರಮ ಅಧಿಕಾರಿಗೆ) | 18150–26925<br>5800–10500<br>18150–26925<br>5800–10500 | ದಿನಾಂಕ: 1–4–2010 ರಿಂದ 31–3–2011 ರವರೆವಿಗೆ |
| | 2. ಅಂಚೆ ಮೂಲಕ ಕನ್ನಡ ಶಿಕ್ಷಣ | 2205–00–001–0–01<br>(ಯೋಜನೇತರ)<br>2205–00–001–0–01<br>(ಯೋಜನೇತರ) | 1. ಪ್ರಥಮ ದರ್ಜೆ ಸಹಾಯಕ –1 (ಒಂದು)<br>2. ಶೀಘ್ರಲಿಪಿಗಾರ –1 (ಒಂದು)<br>3. ದಲಾಯಿತ –1 (ಒಂದು) | 7275–13350<br>7275–13350<br>4800–7275 | |
| | 3. ಧಾರವಾಡ ಜಿಲ್ಲಾ ಕಛೇರಿ | 2205–00–001–0–01<br>(ಯೋಜನೇತರ) | 1. ವಾಹನ ಚಾಲಕ –1 (ಒಂದು) | 5800–10500 | |
| | 4 ಬೆಂಗಳೂರು ಗ್ರಾಮಾಂತರ ಜಿಲ್ಲೆ | 2205–00–001–0–01<br>(ಯೋಜನೇತರ) | 1. ಸಹಾಯಕ ನಿರ್ದೇಶಕರು –1 (ಒಂದು) | 11400–21600 | |
| | 5 ಕೇಂದ್ರ ಕಛೇರಿ (ತನಿಖಾ ಘಟಕ) | 2205–00–001–0–01<br>(ಯೋಜನೇತರ) | 1. ಲೆಕ್ಕಪತ್ರ ಅಧೀಕ್ಷಕರು –1 (ಒಂದು)<br>2. ಪ್ರಥಮ ದರ್ಜೆ ಸಹಾಯಕ –1 (ಒಂದು)<br>3. ಶೀಘ್ರಲಿಪಿಗಾರ –1 (ಒಂದು) | 10800–20025<br>7275–13350<br>7275–13350 | |
| | 6 ಜಿಲ್ಲಾ ಕಚೇರಿ | 2205–00–001–0–01<br>(ಯೋಜನೇತರ) | 1. ವಾಹನ ಚಾಲಕ –2 (ಎರಡು) | 5800–10500 | |
| 6. | 1. ಜಿಲ್ಲಾ ಕಛೇರಿ (ಕನ್ನಡ ಅಭಿವೃದ್ಧಿ–ಯೋಜನೇತರ)<br>2. ಕೇಂದ್ರ ಕಚೇರಿ (ಕನ್ನಡ ಅಭಿವೃದ್ಧಿ–ಯೋಜನೇತರ)<br>3. ಅಕಾಡೆಮಿಯ ಕಾರ್ಯಾಲಯ (ನಿರ್ದೇಶನ ಮತ್ತು ಆಡಳಿತ) | 2205–00–001–0–01<br>(ಯೋಜನೇತರ)<br>2205–00–001–0–01<br>(ಯೋಜನೇತರ)<br>2205–00–001–0–01<br>(ಯೋಜನೇತರ) | 1. ಸಹಾಯಕ ನಿರ್ದೇಶಕರು –1 (ಒಂದು)<br>2. ಬೆರಳಚ್ಚುಗಾರ –1 (ಒಂದು)<br>3 ವಾಹನ ಚಾಲಕ –1 (ಒಂದು)<br>1. ವಾಹನ ಚಾಲಕ –1 (ಒಂದು) | 11400–21600<br>5800–10500<br>5800–10500<br>5800–10500 | ದಿನಾಂಕ 1–4–2010 ರಿಂದ 31–3–2011 ರವರೆಗೆ (ಎಲ್ಲಾ 6 ಹುದ್ದೆಗಳ ೨ ಮಾತ್ರ) |
| 7. | ಕನ್ನಡ ಪುಸ್ತಕ ಪ್ರಾಧಿಕಾರ | 2205–00–102–1–46<br>(ಯೋಜನೇತರ) | 1. ಸಹಾಯಕ ನಿರ್ದೇಶಕರು –1 (ಒಂದು)<br>2. ಲೆಕ್ಕಪತ್ರ ಅಧೀಕ್ಷಕರು –1 (ಒಂದು)<br>3. ಪ್ರಥಮ ದರ್ಜೆ ಸಹಾಯಕ –1 (ಒಂದು)<br>4. ಬೆರಳಚ್ಚುಗಾರ –1 (ಒಂದು)<br>5. ಗ್ರೂಪ್ 'ಡಿ' –1 (ಒಂದು) | 11400–21600<br>10000–18150<br>7275–13350<br>5800–10500<br>4800–7275 | ದಿನಾಂಕ 1–4–2010 ರಿಂದ 31–3–2011 ರವರೆಗೆ |
| 8. | **ಜಿಲ್ಲಾ ರಂಗಮದಿರ**<br>ಬೀದರ್ ಮತ್ತ ಹಾಸನ | 2205–00–001–0–01<br>(ಯೋಜನೇತರ) | 1. ದ್ವಿತೀಯ ದರ್ಜೆ ಸಹಾಯಕ –2 (ಎರಡು)<br>2. ಸೀನಿಯರ್ ಎಲೆಕ್ಟ್ರೀಷಿಯನ್ ಕಂ ಸೌಂಡ್ ಸೂಪರ್ ವೈಸರ್ –2 (ಎರಡು)<br>3. ಗ್ರೂಪ್ 'ಡಿ' –2 (ಎರಡು) (ಜಿಲ್ಲೆಗೆ 1 ರಂತೆ) | 5800–10500<br>8825–16000<br>4800–7275 | ದಿನಾಂಕ 1–4–2010 ರಿಂದ 31–3–2011 ರವರೆಗೆ |

ಕ್ರಮ ಸಂಖ್ಯೆ 8ರ ಕಾಲಂ 2ರಲ್ಲಿ ತಿಳಿಸಿರುವ ಸೀನಿಯರ್ ಎಲೆಕ್ಟ್ರಿಷಿಯನ್ ಕಂ ಸೌಂಡ್ ಸೂಪರ್‌ವೈಸರ್ ಹುದ್ದೆಯ ವೇತನ ಶ್ರೇಣಿ ಸರ್ಕಾರದ ಆದೇಶ ಸಂಖ್ಯೆ: ಎಫ್.ಡಿ.31 ಎಸ್.ಆರ್.ಪಿ. 2007 (VIII), ದಿನಾಂಕ: 14–8–2008ರ ಮೇರೆಗೆ ಹಾಲಿ ಇದ್ದ ವೇತನ ಶ್ರೇಣಿ ರೂ. 6,250–12,000 ರನ್ನು ರೂ. 8825–16000 ಎಂದು ಪರಿಷ್ಕರಿಸಲಾಗಿದೆ. ಅದರಂತೆ ಈ ಹುದ್ದೆಯ ವೇತನ ಶ್ರೇಣಿ ಈ ಮೇಲೆ ತೋರಿಸಲಾಗಿದೆ.

**(ಎಂ.ಕೆ. ಭರ್ಮರಾಜಪ್ಪ)**
ಸರ್ಕಾರದ ಅಧೀನ ಕಾರ್ಯದರ್ಶಿ
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ
(ಆಡಳಿತ ಕನ್ನಡ)

ಪಿ.ಆರ್. 1036

**HEALTH AND FAMILY WELFARE SECRETARIAT**

**Sub :-** Establishment of Citizen Help Desk as a part of Public Private Partnership Initiative – their continuation – reg

**Read :-** 1) Proceedings of the 12th meeting of the Programme Steering Committee, dated : 06-03-2009.

2) **Govt.** Order No. HFW (PR) PPP/EOI/2-P/2008-09 (part file) Bangalore, dated : 08-4-2010

**Preamble:**

As a part of Public Private partnership (PPP) in the department, the establishment of Citizen Help Desks at 24 General/District Hospitals was taken up under Karnataka Health System Development and Reform Project (KHSDRP) National Rural Health Mission (NRHM) in the Govt. Order read at (2) above. The partnership was for a period of one year. After evaluation of the said firms by the Committee headed by the Chief Administrative Officer, KHSDRP and a Review Committee under the chairmanship of the Commissioner, Health Family Welfare and AYUSH Services, a total of 20 firms, i.e., 6 under KHSDRP and 14 under NRHM were finalized and MoUs were signed accordingly. A condition was imposed that their progress shall be reviewed at the district level as separate subject during the meeting of the District Health Society and also by Deputy Commissioner of the respective districts. The date of contract of one year ends on 26-2-2010. It is felt necessary to continue all the 20 Citizen Help Desks under NRHM only. Hence the following Order.

**Government Order No. HFW (PR) PPP/EOI/2-P/2008-09 (part file) , Bangalore, dated : 16-04-2010**

Under the circumstances explained in the preamble, the approval of Government is accorded for the following :

1. For continuation of 20 Citizen Help desks which are already working in the State i.e., 6 under KHSDRP and 14 under NRHM for a period of one year i.e.., from 27-2-2010 to 26-02-2011.
2. To shift the 6 citizen Help Desks which are working under KHSDRP to NRHM with retrospective effect from November 2009.
3. The other conditions shall remain the same as in the Government Order date 08-04-2010.
4. District Project Management Officers are instructed not to incur any expenditure for Citizen Help Desks under KHSDRP from November 2009 onwards. If they have already incurred any expenditure from November 2009 under KHSDRP, the amount should be adjusted against the amount to be reimbursed to NRHM and the balance be drawn and paid to Karnataka State Health and Family Welfare Society.

By Order and in the name of the Governor of Karnataka
(**M. Shashidhar)**
Deputy Secretary to Government **KHSDRP**
Health & Family Welfare Department

P.R. 1037

**GOVERNOR'S SECRETARIAT**

**CORRIGENDUM**

**No. GS 3 TUM 2010, dated 16 -04-2010**

In Notification No. GS 3 TUM 2010, dated 8th April, 2010 Sl. No. 8 in the category of nomination under Section 22(9) at (A) shall be read as Dr. M. N. Sudheendra Rao, Principal, SDM College of Engineering and Technology, Dhavalagiri, Dharwad-580007.

By Order of the Governor and Chancellor
M.P. Govinda Raju
Under Secretary to Governor

P.R. 1038

**ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ**

**ವಿಷಯ** : ವಾಸ್ತುಶಿಲ್ಪ ಇಲಾಖೆಯ "ಮುಖ್ಯ ಆಕೃತಿ ರಚನಾಕಾರ (Head draftsmen) ಹುದ್ದೆಯ ಪದನಾಮವನ್ನು "ತಾಂತ್ರಿಕ ಸಹಾಯಕರು" (Technical Assistant) ಎಂದು ಮರುಪದನಾಮೀಕರಿಸುವ ಬಗ್ಗೆ.

**ಓದಲಾಗಿದೆ** : ಪ್ರಧಾನ ಮುಖ್ಯವಾಸ್ತುಶಿಲ್ಪಿ, ವಾಸ್ತುಶಿಲ್ಪ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಪ್ರ.ಮು.ವಾ: 2740:09–10, ದಿನಾಂಕ: 1–2–2010.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ ಪ್ರಧಾನ ಮುಖ್ಯವಾಸ್ತುಶಿಲ್ಪಿ, ವಾಸ್ತುಶಿಲ್ಪ ಇಲಾಖೆ, ಬೆಂಗಳೂರು ಇವರು ವಾಸ್ತುಶಿಲ್ಪಿ ಇಲಾಖೆಗೆ ಸಂಖ್ಯೆ: ಲೋಇ 10 ಸೇವಾಬ 06, ದಿನಾಂಕ: 24–2–07ರ ಆದೇಶದಲ್ಲಿ ಸೃಜಿಸಲಾಗಿರುವ " ಮುಖ್ಯ ಆಕೃತಿ ರಚನಾಕಾರ" (Head Draftsmen) ಹುದ್ದೆಯ ಪದನಾಮವನ್ನು, ಲೋಕೋಪಯೋಗಿ ಇಲಾಖೆಯಲ್ಲಿ ಸಹಾಯಕ ಕಾರ್ಯಪಾಲಕ ಅಭಿಯಂತರರ ಹುದ್ದೆಗಳ ಸಮನಾದ ಹುದ್ದೆಗಳನ್ನು ತಾಂತ್ರಿಕ ಸಹಾಯಕರ ಹುದ್ದೆಗಳು ಎಂದು ಇರುವಂತೆ "ತಾಂತ್ರಿಕ ಸಹಾಯಕರು" (Technical Assistant) ಎಂದು ಪದನಾಮೀಕರಿಸಲು ಕೋರಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ರೀತಿಯ ಮರು ಪದನಾಮೀಕರಣದಿಂದ ಸರ್ಕಾರಕ್ಕೆ ಯಾವುದೇ ಆರ್ಥಿಕ ಹೊರೆ ಬೀಳುವುದಿಲ್ಲವಾದ ಕಾರಣ ಹಾಗೂ ಆಡಳಿತಾತ್ಮಕ ಹಿತದೃಷ್ಟಿಯಿಂದ ವಾಸ್ತುಶಿಲ್ಪ ಇಲಾಖೆಯ "ಮುಖ್ಯ ಆಕೃತಿ ರಚನಾಕಾರ" (Head Draftsmen) ಹುದ್ದೆಗಳನ್ನು "ತಾಂತ್ರಿಕ ಸಹಾಯಕರು" (Technical Assistant) ಎಂದು ಮರುಪದನಾಮೀಕರಿಸಲು ತೀರ್ಮಾನಿಸಿದೆ. ಅಂತೆಯೇ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಲೋಇ 04 ಸೇವಾಬ 10, ಬೆಂಗಳೂರು, ದಿನಾಂಕ: 7ನೇ ಏಪ್ರಿಲ್ 2010**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ ತರುವಾಯ, ಸರ್ಕಾರವು ಆಡಳಿತಾತ್ಮಕ ಹಿತದೃಷ್ಟಿಯಿಂದ ವಾಸ್ತುಶಿಲ್ಪ ಇಲಾಖೆಯಲ್ಲಿನ "ಮುಖ್ಯ ಆಕೃತಿ ರಚನಾಕಾರ" (Head Draftsmen) ಹುದ್ದೆಯ ಪದನಾಮವನ್ನು, ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ತಿದ್ದುಪಡಿ ಮಾಡುವುದನ್ನು ಕಾಯ್ದಿರಿಸಿ "ತಾಂತ್ರಿಕ ಸಹಾಯಕರು" (Technical Assistant) ಎಂದು ತಕ್ಷಣದಿಂದಲೇ ಜಾರಿಗೆ ಬರುವಂತೆ ಮರುಪದನಾಮೀಕರಿಸಿ ಆದೇಶಿಸಿದೆ.

ಈ ಆದೇಶವನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ದಿನಾಂಕ : 30–3–2010ರ ಟಿಪ್ಪಣಿ ಸಂಖ್ಯೆ : ಸಿಅಸುಇ:21 ಸೇನಿಡಿ 2010ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಲಕ್ಷ್ಮೀನರಸಿಂಹಯ್ಯ)**
ಸರ್ಕಾರದ ಅಧೀನ ಕಾರ್ಯದರ್ಶಿ
ಲೋಕೋಪಯೋಗಿ, ಬಂದರು ಮತ್ತು
ಒಳನಾಡು ಜಲಸಾರಿಗೆ ಇಲಾಖೆ (ಸೇವೆಗಳು–ಬಿ)

ಪಿ.ಆರ್. 1039

## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ

### ತಿದ್ದುಪಡಿ

ಸಂಖ್ಯೆ :ಲೋಇ 122 ಸೇಸಕಿ 09, ಬೆಂಗಳೂರು, ದಿನಾಂಕ 09–4–2010

ಸರ್ಕಾರದ ಸಂಖ್ಯೆ ಲೋಇ: 149 : ಸೇಸಕಿ 2005, ದಿನಾಂಕ 18–11–2008ರ ತಿದ್ದುಪಡಿಯಲ್ಲಿ "** ಪರಿಶಿಷ್ಟ ಪಂಗಡದ ಸೌಲಭ್ಯಗಳು ಸಿಂಧುತ್ವ ಪ್ರಮಾಣ ಪತ್ರ ನೀಡಿದ ದಿನಾಂಕದಿಂದ ಅಂದರೆ ದಿನಾಂಕ 24–2–2007 ರಿಂದ ಭವಿಷ್ಯ ವರ್ತಿಯಾಗಿ ಅನ್ವಯಿಸುವ ಷರತ್ತುಗೊಳಪಟ್ಟಿದೆ" ಎಂಬುದನ್ನು ಈ ಕೆಳಕಂಡಂತೆ ತಿದ್ದಿಕೊಂಡು ಓದಿಕೊಳ್ಳತಕ್ಕದ್ದು.

"** ಪರಿಶಿಷ್ಟ ಪಂಗಡದ ಸೌಲಭ್ಯವು ತಹಸೀಲ್ದಾರ್, ಬಸವಕಲ್ಯಾಣ ಇವರು ಜಾತಿ ಪ್ರಮಾಣ ಪತ್ರ ನೀಡಿದ ದಿನಾಂಕದಿಂದ ಅಂದರೆ ದಿನಾಕ 30–12–1999 ರಿಂದ ಅನ್ವಯಿಸುವ ಷರತ್ತಿಗೊಳಪಟ್ಟಿದೆ".

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಲಕ್ಷ್ಮೀನರಸಿಂಹಯ್ಯ)**
ಸರ್ಕಾರದ ಅಧೀನ ಕಾರ್ಯದರ್ಶಿ
ಲೋಕೋಪಯೋಗಿ, ಬಂದರು ಮತ್ತು
ಒಳನಾಡು ಜಲಸಾರಿಗೆ ಇಲಾಖೆ (ಸೇವೆಗಳು–ಬಿ)

ಪಿ.ಆರ್. 1040

## ಒಳಾಡಳಿತ ಸಚಿವಾಲಯ

**ವಿಷಯ** : ಒಳಾಡಳಿತ ಇಲಾಖೆಯ ಸರ್ಕಾರದ ಕಾರ್ಯದರ್ಶಿ (ಪಿಸಿಎಎಸ್) ಇವರ ವಾಹನ ಸಂಖ್ಯೆ ಕೆಎ–01–ಜಿ–4300 ವಾಹನದ ದುರಸ್ತಿ ಮಾಡಲು ಮಂಜೂರಾತಿ ಕುರಿತು.

**ಓದಲಾಗಿದೆ** : ಸರ್ಕಾರದ ಕಾರ್ಯದರ್ಶಿ (ಪಿಸಿಎಎಸ್)ಯವರ ಹಿರಿಯ ಆಪ್ತ ಸಹಾಯಕಿ ಒಳಾಡಳಿತ ಇಲಾಖೆ ಇವರ ಟಿಪ್ಪಣಿ ಸಂಖ್ಯೆ ಒಇ/07/ಕಾ/2010, ದಿನಾಂಕ 19–04–2010

**ಪ್ರಸ್ತಾವನೆ :**

ಮೇಲೆ ಓದಲಾದ (1) ರ ಟಿಪ್ಪಣಿಯಲ್ಲಿ ಸರ್ಕಾರದ ಕಾರ್ಯದರ್ಶಿ (ಪಿಸಿಎಎಸ್) ಒಳಾಡಳಿತ ಇಲಾಖೆ, ಇವರ ವಾಹನ ಸಂಖ್ಯೆ ಕೆಎ–01 ಜಿ 4300 ರ ವಾಹನದಲ್ಲಿ ಆಯಿಲ್ ಸೋರಿ ಹೋಗುತ್ತಿರುವುದರಿಂದ ಸದರಿ ವಾಹನದ ವಾಹನ ಚಾಲಕರು ತಿಳಿಸಿದ್ದು, ಅದರಂತೆ ಪ್ರಾದೇಶಿಕ ಸಾರಿಗೆ ಅಧಿಕಾರಿಯವರು ವಾಹನವನ್ನು ಪರಿಶೀಲಿಸಿ ಈ ಸದರಿ ವಾಹನದ ಕೆಲವು ಭಾಗಗಳ ಬದಲಾವಣೆಗೆ ದಿನಾಂಕ 03–04–2010 ರಂದು ಶಿಫಾರಸ್ಸನ್ನು ಮಾಡಿರುತ್ತಾರೆ ಅದರನ್ವಯ ಸರ್ಕಾರದ ಅಂಗೀಕೃತ ಗ್ಯಾರೇಜ್ ಆದ Concord Motors (India) Ltd., ಬೆಂಗಳೂರು ಇವರಿಂದ ವಾಹನ ದುರಸ್ತಿ ಕಾರ್ಯವನ್ನು ಕೈಗೊಂಡು ಸದರಿ ಗ್ಯಾರೇಜ್‌ನ ಮುಖ್ಯಸ್ಥರು ನೀಡಿರುವ ಬಿಲ್ಲಿನ ಒಟ್ಟು ಮೊತ್ತ ರೂ. 31,889–00 (ಮೂವತ್ತೊಂದು ಸಾವಿರದ ಎಂಟುನೂರ ಎಂಭತ್ತೊಂಭತ್ತು ರೂಪಾಯಿಗಳು ಮಾತ್ರ)ಗಳ ಬಿಲ್ಲನ್ನು ಲಗತ್ತಿಸಿ ಹಾಗೂ ಪ್ರಾದೇಶಿಕ ಸಾರಿಗೆ ಅಧಿಕಾರಿಯವರ ಪರಿಶೀಲನಾ ದೃಢೀಕರಣ ಪತ್ರಗಳ ಪ್ರತಿಗಳನ್ನು ಲಗತ್ತಿಸಿ ಸದರಿ ಸಂಸ್ಥೆಗೆ ಪಾವತಿಸಲು ಸರ್ಕಾರದ ಆದೇಶವನ್ನು ಹೊರಡಿಸುವಂತೆ ಕೋರಿರುತ್ತಾರೆ.

**ಸರ್ಕಾರದ ಆದೇಶ ಸಂಖ್ಯೆ. ಹೆಚ್‌ಡಿ 39 ಸಶಾಶಾ 2008 ಬೆಂಗಳೂರು, ದಿನಾಂಕ: 23ನೇ ಏಪ್ರಿಲ್ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರದ ಕಾರ್ಯದರ್ಶಿ (ಪಿಸಿಎಎಸ್)ಯವರ ವಾಹನ ಸಂಖ್ಯೆ ಕೆಎ01 ಜಿ 4300 ವಾಹನಕ್ಕೆ Concord Motors (India) Ltd., ಬೆಂಗಳೂರು, ಇವರಿಂದ ವಾಹನ ದುರಸ್ತಿ ಕಾರ್ಯವನ್ನು ಕೈಗೊಂಡಿರುವುದಕ್ಕೆ ರೂ. 31,889–00 (ಮೂವತ್ತೊಂದು ಸಾವಿರದ ಎಂಟುನೂರ ಎಂಭತ್ತೊಂಭತ್ತು ರೂಪಾಯಿಗಳು ಮಾತ್ರ)ಗಳಿಗೆ ಸರ್ಕಾರವು ಮಂಜೂರಾತಿ ನೀಡಿದೆ.

ಈ ವೆಚ್ಚವನ್ನು 2010–11ನೇ ಸಾಲಿನ ಲೆಕ್ಕ ಶೀರ್ಷಿಕೆ "2052 Sectt General Services -090 Sectt-01 KGS-195 TRANSPORT EXPENSES" ರ ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ 10–07–1969ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿದ ಆರ್ಥಿಕ ಅಧೀಕಾರದ ಅನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ. ಕೃಷ್ಣಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಸಮನ್ವಯ)

ಪಿ.ಆರ್. 1064

**ಕಂದಾಯ ಸಚಿವಾಲಯ**

**ವಿಷಯ** : ಹಾವೇರಿ ಜಿಲ್ಲೆ, ಹಾನಗಲ್ಲ ತಾಲ್ಲೂಕು, ಆಡೂರು ಗ್ರಾಮದ ಶ್ರೀ ಮಾರ್ತಾಂಡ ಉರ್ಫ್ ಮಾಲತೇಶ ದೇವಾಲಯವನ್ನು ಅಧಿಸೂಚಿತ ಪಟ್ಟಿಯಲ್ಲಿ ಸೇರ್ಪಡೆ ಮಾಡುವ ಬಗ್ಗೆ.

**ಓದಲಾಗಿದೆ** : ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆರವರ ಪತ್ರ ಸಂಖ್ಯೆ: ಏಕರೂಪ ಶಾಸನ ಸಿಆರ್ 26/2009–10 ದಿನಾಂಕ : 10–02–2010.

**ಪ್ರಸ್ತಾವನೆ :**

ಮೇಲೆ ಓದಲಾದ ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆರವರ ಪತ್ರ ದಿನಾಂಕ: 10–02–2010 ರಲ್ಲಿ ಹಾವೇರಿ ಜಿಲ್ಲೆ, ಹಾನಗಲ್ಲ ತಾಲ್ಲೂಕು, ಆಡೂರು ಗ್ರಾಮದ ಶ್ರೀ ಮಾರ್ತಾಂಡ ಉರ್ಫ್ ಮಾಲತೇಶ ದೇವಾಲಯವು ಬಾಂಬೆ ಪಬ್ಲಿಕ್ ಟ್ರಸ್ಟ್ ಕಾಯ್ದೆ 1950 ಅಡಿಯಲ್ಲಿ ನೋಂದಣಿಯಾಗಿದ್ದು, ಈ ದೇವಾಲಯವು ಒಂದು ಸಾರ್ವಜನಿಕ ದೇವಾಲಯವಾಗಿದೆ. ಹಿಂದೆ ಅಧಿಸೂಚಿತ ಪಟ್ಟಿಯನ್ನು ಪ್ರಕಟಿಸುವಾಗ ಕೈ ಬಿಟ್ಟು ಹೋಗಿರುತ್ತದೆ. ಆದಕಾರಣ ದೇವಾಲಯವನ್ನು ಅಧಿಸೂಚಿತ ಪಟ್ಟಿಯಲ್ಲಿ ಸೇರಿಸುವಂತೆ ಜಿಲ್ಲಾಧಿಕಾರಿಗಳು, ಹಾವೇರಿ ಜಿಲ್ಲೆರವರು ಕೋರಿರುತ್ತಾರೆ.

ಜಿಲ್ಲಾಧಿಕಾರಿಗಳು, ಹಾವೇರಿ ಜಿಲ್ಲೆರವರ ಕೋರಿಕೆಯಂತೆ ಹಾವೇರಿ ಜಿಲ್ಲೆ, ಹಾನಗಲ್ಲ ತಾಲ್ಲೂಕು, ಆಡೂರು ಗ್ರಾಮದ ಶ್ರೀ ಮಾರ್ತಾಂಡ ಉರ್ಫ್ ಮಾಲತೇಶ ದೇವಾಲಯವನ್ನು ಅಧಿಸೂಚಿತ ಪಟ್ಟಿಗೆ ಸೇರಿಸಿ ಆದೇಶ ಹೊರಡಿಸುವಂತೆ ಸರ್ಕಾರಕ್ಕೆ ಕೋರಿಕೆ ಸಲ್ಲಿಸಿರುತ್ತಾರೆ.

ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆರವರ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 31 ಮುಅಬಿ 2010, ಬೆಂಗಳೂರು, ದಿನಾಂಕ: 17ನೇ ಏಪ್ರಿಲ್ 2010**

ಮೇಲೆ ಪ್ರಸ್ತಾಪಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಹಾವೇರಿ ಜಿಲ್ಲೆ, ಹಾನಗಲ್ಲ ತಾಲ್ಲೂಕು, ಆಡೂರು ಗ್ರಾಮದ ಶ್ರೀ ಮಾರ್ತಾಂಡ ಉರ್ಫ್ ಮಾಲತೇಶ ದೇವಾಲಯವನ್ನು ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಕಾಯ್ದೆ 1997ರ ಸೆಕ್ಷನ್ 23(2) ರನ್ವಯ ಸಂಸ್ಥೆಯನ್ನು ಅಧಿಸೂಚಿತ ಪಟ್ಟಿಗೆ ಸೇರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಲ್. ಎಸ್. ಶ್ರೀಕಂಠಬಾಬು**
ಪೀಠಾಧಿಕಾರಿ
ಕಂದಾಯ ಇಲಾಖೆ (ಮುಜರಾಯಿ)

ಪಿ.ಆರ್. 1065

## PERSONNEL AND ADMINISTRATIVE REFORMS SECRETARAIT

**Sub :-** Writing of Performance Appraisal Report-Determination of Authorities-reg.

**Read :-** 1. Government Order No. DPAR 137 SPS 2009, dated 23-10-2009.

2. Letter No. 51/CB/DGP/CID/2009, dated 31-10-2009 of DGP, CID Training, Special Units and Economic offences Bangalore.

3. Energy Department, U.O. Note No. EN. 164 EEb 2009 dated 23-12-2009.

4. Water Resources Department's U.O. Note No. ಜಸಂಇ 265 ಸೆಎಸು 2009, dated 15-01-2010.

**Government Order No. DPAR 137 SPS 2009, Bangalore, dated : 22-04-2010**

The Government directs that in the annexure to Government Order dated 23-10-2009 read at (1) above, the existing entries at SI, 49,74 and 87 shall be modified as follows:

| SI No. | Name of the Post | Reporting Authority | Reviewing Authority | Accepting Authority |
|---|---|---|---|---|
| 49 | IGP (Vigilance and Enforcement) Karnataka Power Transmission | Energy Secretary | Chief Secretary | Minister Concerned |

| | | | | |
|---|---|---|---|---|
| | Corporation Ltd and all ESCOMs | | | |
| 74 | DIGP, CID Economic offences | IGP CID Economic offences | DGP, CID | DG&IGP |
| 87 | SP, CID | DIG, CID or DIG Economic offences, CID | IGP CID or IGP CID Economic offences | DGP, CID |

This order shall be applicable to PARs for the reporting year 2009-10 (ending 31.03.2010) & onwards.

By Order and in the name of the Governor of Karnataka
**Ashok P. Atre**
P.R. 1066 Under Secretary to Government
DPAR (Services-IV)

**ಸಾರಿಗೆ ಸಚಿವಾಲಯ**

**ವಿಷಯ** : ಸಾರಿಗೆ ಇಲಾಖೆಯ ಜಂಟಿ ಸಾರಿಗೆ ಆಯುಕ್ತರು, (ಗುಪ್ತ ದಳ ಮತ್ತು ವಾಯು ಮಾಲಿನ್ಯ) ಹುದ್ದೆಯನ್ನು ಜಂಟಿ ಸಾರಿಗೆ ಆಯುಕ್ತರು (ಪರಿಸರ ಮತ್ತು ಇ.–ಆಡಳಿತ) ಎಂದು ಮರುಪದನಾಮೀಕರಿಸುವ ಬಗ್ಗೆ.

**ಓದಲಾಗಿದೆ** : 1) ಸರ್ಕಾರದ ಆದೇಶ ಸಂಖ್ಯೆ : ಒಸಾಇ 120: ಟಿಎಂಇ 2002 ದಿನಾಂಕ: 21–06–2003
2) ಸಾರಿಗೆ ಆಯುಕ್ತರ ಪತ್ರ ಸಂಖ್ಯೆ ಸಾಆ/ಸಿಬ್ಬಂದಿ–1/ಪಿ.ಆರ್–991/90–91, ದಿನಾಂಕ: 21–10–2009

**ಪ್ರಸ್ತಾವನೆ :**

ಸಾರಿಗೆ ಇಲಾಖೆಯ ಆಡಳಿತದಲ್ಲಿ ಪಾರದರ್ಶಕತೆ, ಸರ್ಕಾರದ ರಾಜಸ್ವ ಹೆಚ್ಚಿಸಲು, ಬೃಹದಾಕಾರವಾಗಿ ಬೆಳೆಯುತ್ತಿರುವ ಬೆಂಗಳೂರು ಮತ್ತು ಇತರ ನಗರಗಳಲ್ಲಿ ವಾಹನಗಳ ಹೆಚ್ಚಳವಾದ ಪರಿಣಾಮವಾಗಿ ವಾಯು ಮಾಲಿನ್ಯ ನಿರ್ವಹಣೆ ಕಾರ್ಯಸೂಚಿ ಮೂಲಕ ನಿಯಂತ್ರಣ ಮಾಡಲು ಅನುಕೂಲವಾಗುವಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (1) ರಲ್ಲಿನ ಸರ್ಕಾರಿ ಆದೇಶದಲ್ಲಿ ಜಂಟಿ ಸಾರಿಗೆ ಆಯುಕ್ತರು (ಗುಪ್ತದಳ ಮತ್ತು ವಾಯುಮಾಲಿನ್ಯ) ಹುದ್ದೆಯನ್ನು ಸೃಜಿಸಲಾಗಿತ್ತು.

ಜಂಟಿ ಸಾರಿಗೆ ಆಯುಕ್ತರು (ಗುಪ್ತದಳ ಮತ್ತು ವಾಯುಮಾಲಿನ್ಯ) ಇವರು ಹಾಲಿ ನಿರ್ವಹಿಸುತ್ತಿರುವ ಕೆಲಸಗಳೊಂದಿಗೆ, ಸಾರಿಗೆ ಇಲಾಖೆಯ ಎಲ್ಲಾ ಕಛೇರಿಗಳಲ್ಲಿ ಗಣಕೀಕೃತ ಸೇವಾ ವಿಲೇವಾರಿ ಪದ್ಧತಿಯನ್ನು ಜಾರಿಗೆ ತರುವಲ್ಲಿ ಸದಸ್ಯ–ಕಾರ್ಯದರ್ಶಿಯಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಆದ್ದರಿಂದ ಜಂಟಿ ಸಾರಿಗೆ ಆಯುಕ್ತರು, (ಗುಪ್ತದಳ ಮತ್ತು ವಾಯು ಮಾಲಿನ್ಯ) ಹುದ್ದೆಯನ್ನು ಜಂಟಿ ಸಾರಿಗೆ ಆಯುಕ್ತರು (ಪರಿಸರ ಮತ್ತು ಇ–ಆಡಳಿತ) ಎಂದು ಮರುಪದನಾಮಕರಣ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ, ಸರ್ಕಾರವು ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ. ಸಾರಿಇ 220 ಸಾಇಸೇ 2009 ಬೆಂಗಳೂರು, ದಿನಾಂಕ: 21ನೇ ಏಪ್ರಿಲ್ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಸಾರಿಗೆ ಇಲಾಖೆಯಲ್ಲಿನ ಜಂಟಿ ಸಾರಿಗೆ ಆಯುಕ್ತರು, (ಗುಪ್ತ ದಳ ಮತ್ತು ವಾಯು ಮಾಲಿನ್ಯ) ಹುದ್ದೆಯನ್ನು ಜಂಟಿ ಸಾರಿಗೆ ಆಯುಕ್ತರು (ಪರಿಸರ ಮತ್ತು ಇ –ಆಡಳಿತ) ಎಂದು ಮರುಪದನಾಮೀಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಎಸ್. ಶ್ರೀಧರ**
ಪಿ.ಆರ್. 1067 ಸರ್ಕಾರದ ಅಧೀನ ಕಾರ್ಯದರ್ಶಿ
ಸಾರಿಗೆ ಇಲಾಖೆ

## ಕಂದಾಯ ಸಚಿವಾಲಯ

**ವಿಷಯ** : ಆಸರೆ ಯೋಜನೆ ಮನೆಗಳ ನಿರ್ಮಾಣಕ್ಕಾಗಿ ಲೆಕ್ಕ ಶೀರ್ಷಿಕೆ 8235-11-111-0-02 "Public Contributions to Calamity Relief" ಅಡಿಯಲ್ಲಿ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ** : 1) ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 23 ಟಿಎಆರ್ 2009, ದಿನಾಂಕ 6-4-2010

2) ಮಾನ್ಯ ಮುಖ್ಯಮಂತ್ರಿಯವರ ಕಾರ್ಯದರ್ಶಿಯವರ ಟಿಪ್ಪಣಿ ಸಂಖ್ಯೆ: ಮುಮಕಾ/2039/2010, ದಿನಾಂಕ : 7-4-2010.

**ಪ್ರಸ್ತಾವನೆ :**

ಮೇಲೆ ಓದಲಾದ ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 23 ಟಿಎಆರ್ 2009 ದಿನಾಂಕ : 06-04-2010ರಲ್ಲಿ ಆಸರೆ ಯೋಜನೆ ಅಡಿಯಲ್ಲಿ ನೆರೆ ಪೀಡಿತ ಜಿಲ್ಲೆಗಳಲ್ಲಿ ಮನೆ ನಿರ್ಮಾಣಕ್ಕಾಗಿ ಕರ್ನಾಟಕ ಗೃಹ ಮಂಡಳಿ ರಾಜೀವ್‌ಗಾಂಧಿ ಗ್ರಾಮೀಣ ಗೃಹ ನಿರ್ಮಾಣ ಮಂಡಳಿ ಹಾಗೂ ಕರ್ನಾಟಕ ರೂರಲ್ ಇನ್‌ಫ್ರಾಸ್ಟ್ರಕ್ಚರ್ ಡೆವಲಪ್‌ಮೆಂಟ್ ಲಿಮಿಟೆಡ್, ಇವರುಗಳಿಗೆ ಲೆಕ್ಕ ಶೀರ್ಷಿಕೆ 8235-00-111-0-02 "Public Contribution to Calamity Relief" ಯಿಂದ ಮಾನ್ಯ ಮುಖ್ಯಮಂತ್ರಿಗಳ ಅನುಮೋದನೆ ಪಡೆದು ನೇರವಾಗಿ ಹಣ ಬಿಡುಗಡೆ ಮಾಡುವಂತೆ ಆದೇಶಿಸಿದೆ.

ಸರ್ಕಾರದ ವತಿಯಿಂದ ಕರ್ನಾಟಕ ರೂರಲ್ ಇನ್‌ಫ್ರಾಸ್ಟ್ರಕ್ಚರ್ ಡೆವಲಪ್‌ಮೆಂಟ್ ಲಿಮಿಟೆಡ್, (ಕರ್ನಾಟಕ ಭೂ ಸೇನಾ ನಿಗಮ) ಇವರು ಆಸರೆ ಯೋಜನೆ ಅಡಿಯಲ್ಲಿ 9 ಜಿಲ್ಲೆಗಳಲ್ಲಿ (73 ಗ್ರಾಮಗಳಲ್ಲಿ) 9345 ಮನೆಗಳನ್ನು ನಿರ್ಮಿಸಲು ಈಗಾಗಲೇ ಮಾನ್ಯ ಮುಖ್ಯಮಂತ್ರಿಯವರು ಅನುಮೋದನೆ ನೀಡಿರುವುದಾಗಿ, ಇದಕ್ಕಾಗಿ ರೂ. 20-00 ಕೋಟಿಗಳ ಹಣವನ್ನು ಹಾಗೂ ಕರ್ನಾಟಕ ಗೃಹಮಂಡಳಿ ಹಾಗೂ ರಾಜೀವ್‌ಗಾಂಧಿ ವಸತಿ ನಿಗಮದ ಮೂಲಕ 4 ಜಿಲ್ಲೆಗಳಲ್ಲಿ (44 ಗ್ರಾಮಗಳಲ್ಲಿ) 10658 ಮನೆಗಳನ್ನು ನಿರ್ಮಿಸಲು ರಾಜೀವ್‌ಗಾಂಧಿ ಗ್ರಾಮೀಣ ವಸತಿ ನಿಗಮಕ್ಕೆ ರೂ. 15-00 ಕೋಟಿ ಮತ್ತು ಕರ್ನಾಟಕ ಗೃಹ ಮಂಡಳಿಗೆ ರೂ. 5-00 ಕೋಟಿ ಹಣವನ್ನು ಬಿಡುಗಡೆ ಮಾಡಲು ಮೇಲೆ ಓದಲಾದ ಮುಖ್ಯಮಂತ್ರಿಗಳ ಕಾರ್ಯದರ್ಶಿಯವರ ದಿನಾಂಕ: 7-4-2010ರ ಟಿಪ್ಪಣಿಯಲ್ಲಿ ತಿಳಿಸಿರುತ್ತಾರೆ. ಈ ಹಿನ್ನೆಲೆಯಲ್ಲಿ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ. ಕಂಇ 174 ಟಿಎನ್‌ಆರ್ 2010 ಬೆಂಗಳೂರು, ದಿನಾಂಕ: 15ನೇ ಏಪ್ರಿಲ್ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಆಸರೆ ಯೋಜನೆ ಅಡಿಯಲ್ಲಿ ನೆರೆ ಪೀಡಿತ ಜಿಲ್ಲೆಗಳಲ್ಲಿ ಮನೆಗಳನ್ನು ನಿರ್ಮಾಣ ಮಾಡಲು ಕೆಳಕಂಡ ಸಂಸ್ಥೆಗಳಿಗೆ ಒಟ್ಟು ರೂ. 40-00 ಕೋಟಿಗಳನ್ನು (ರೂ. ನಲವತ್ತು ಕೋಟಿಗಳು ಮಾತ್ರ) ಲೆಕ್ಕ ಶೀರ್ಷಿಕೆ 8235-00-111-0-02 "Public Contribution to Calamity Relief" ಅಡಿಯಲ್ಲಿ ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

| ಕ್ರ. ಸಂ. | ಸಂಸ್ಥೆ | ಬಿಡುಗಡೆ ಮಾಡಿದ ಅನುದಾನ (ರೂ. ಕೋಟಿಗಳಲ್ಲಿ) |
|---|---|---|
| 1 | ಕರ್ನಾಟಕ ರೂರಲ್ ಇನ್‌ಫ್ರಾಸ್ಟ್ರಕ್ಚರ್ ಡೆವಲಪ್‌ಮೆಂಟ್ ಲಿಮಿಟೆಡ್, ಬೆಂಗಳೂರು | 20-00 |
| 2 | ರಾಜೀವ್‌ಗಾಂಧಿ ಗ್ರಾಮೀಣ ವಸತಿ ನಿಗಮ, ಬೆಂಗಳೂರು | 15-00 |
| 3 | ಕರ್ನಾಟಕ ಗೃಹ ಮಂಡಳಿ, ಬೆಂಗಳೂರು | 5-00 |
| | ಒಟ್ಟು | 40-00 |

(ಒಟ್ಟು ನಲವತ್ತು ಕೋಟಿ ರೂ. ಗಳು)

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು ಸಂಬಂಧಿಸಿದ ಸಂಸ್ಥೆಗಳ ಮುಖ್ಯಸ್ಥರು, ಅನುದಾನದ ಬಿಲ್ (Payees Receipt) ತಯಾರಿಸಿ, ಸರ್ಕಾರದ ಕಾರ್ಯದರ್ಶಿಗಳು, (ವಿಪತ್ತು ನಿರ್ವಹಣೆ), ಕಂದಾಯ ಇಲಾಖೆ ಇವರಿಂದ ಮೇಲು ಸಹಿ ಪಡೆದು ಖಜಾನೆಗೆ ಸಲ್ಲಿಸಲು ಸೂಚಿಸಿದೆ.

ಅನುದಾನವನ್ನು ಬಿಡುಗಡೆ ಮಾಡಲಾದ ಉದ್ದೇಶಕ್ಕಾಗಿಯೇ ಉಪಯೋಗಿಸತಕ್ಕದ್ದು ಹಾಗೂ ಅನುದಾನದ ವೆಚ್ಚ ಮಾಡಿದ್ದಕ್ಕೆ ಉಪಯೋಗಿತ ಪ್ರಮಾಣಪತ್ರ ಸಲ್ಲಿಸುವುದು.

ಈ ಆದೇಶವನ್ನು ಮುಖ್ಯಮಂತ್ರಿಯವರ ಕಾರ್ಯದರ್ಶಿಯವರ ಟಿಪ್ಪಣಿ ಸಂಖ್ಯೆ: ಮುಮಕಾ/2039/2010 ದಿನಾಂಕ : 7–04–2010ರ ಆದೇಶದ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಟಿ. ಗಂಗಾಧರ)**
ಪಿ.ಆರ್. 1068 ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ವಿ.ನಿ. ಮತ್ತು ಸೇವೆಗಳು–2)

**ಕಂದಾಯ ಸಚಿವಾಲಯ**

**ವಿಷಯ :** ಶ್ರೀ ವಿ.ಎಸ್. ಜೋಶಿ, ನಿವೃತ್ತ ತಹಶೀಲ್ದಾರ್ ಇವರಿಗೆ ರಾಜ್ಯಮಟ್ಟದ ಶಿರಸ್ತೇದಾರರ ಅಂತಿಮ ಜ್ಯೇಷ್ಠತಾ ಪಟ್ಟಿಯಲ್ಲಿ ನೀಡಲಾದ ಅರ್ಹತಾ ದಿನಾಂಕಗಳನ್ನು ಆಧರಿಸಿ, ಪೂರ್ವಾನ್ವಯವಾಗಿ ತಹಶೀಲ್ದಾರ್ ಗ್ರೇಡ್–2 ಮತ್ತು ತಹಶೀಲ್ದಾರ್ ಗ್ರೇಡ್–1 ವೃಂದಕ್ಕೆ ಅರ್ಹತಾ ದಿನಾಂಕ ನಿಗದಿಪಡಿಸುವ ಬಗ್ಗೆ.

**ಓದಲಾಗಿದೆ :** 1. ಶ್ರೀ ವ್ಹಿ.ಎಸ್. ಜೋಶಿ, ನಿವೃತ್ತ ತಹಶೀಲ್ದಾರ್ ಇವರು ಸರ್ಕಾರಕ್ಕೆ ಸಲ್ಲಿಸಿದ ದಿನಾಂಕ: 25–05–2009ರ ಮನವಿ.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಶ್ರೀ ವ್ಹಿ.ಎಸ್. ಜೋಶಿ, ನಿವೃತ್ತ ತಹಶೀಲ್ದಾರ್ ಇವರ ಮನವಿಯಲ್ಲಿ ರಾಜ್ಯಮಟ್ಟದ ಶಿರಸ್ತೇದಾರರ ವೃಂದದಲ್ಲಿ ಸರಕಾರದ ಅಧಿಸೂಚನೆ ಸಂ.: ಆರ್‌ಡಿ 105 ಬಿಎಂಎಂ 94, ದಿನಾಂಕ: 27–09–94 ರಡಿ ತಮ್ಮ ಜ್ಯೇಷ್ಠತೆಯನ್ನು ಕ್ರ.ಸ. 3569 ರಲ್ಲಿ ನಿಗದಿಪಡಿಸಿ, ಶಿರಸ್ತೇದಾರರ ವೃಂದದಲ್ಲಿ ದಿನಾಂಕ: 10–03–81 ಅರ್ಹತಾ ದಿನಾಂಕ ನಿಗದಿಪಡಿಸಿದೆ. ಇದೇ ಅಧಿಸೂಚನೆಯಲ್ಲಿ ತಮಗಿಂತ ಸೇವಾ ಜೇಷ್ಠತೆಯಲ್ಲಿ ಕಿರಿಯರಾದ ಬಿ.ಸಿ.ಪಾಟೀಲ ಇವರಿಗೆ ಜೇಷ್ಠತೆಯನ್ನು 3673 ರಲ್ಲಿ ನಿಗದಿಪಡಿಸಿ, ಅವರಿಗೆ ದಿ: 14–08–81 ಅರ್ಹತಾ ದಿನಾಂಕವನ್ನಾಗಿ ನಿಗದಿಪಡಿಸಿದೆ. ತದನಂತರ, ಮರು ಪರಿಷ್ಕರಣೆ ನಂತರ ಪ್ರಕಟಿಸಲಾದ ರಾಜ್ಯಮಟ್ಟದ ಶಿರಸ್ತೇದಾರರ/ಉಪತಹಶೀಲ್ದಾರರ ಅಂತಿಮ ಜ್ಯೇಷ್ಠತಾ ಪಟ್ಟಿಯ ಅಧಿಸೂಚನೆ ಸಂ.: ಆಡ್‌ಡಿ 199 ಬಿಎಂಎಂ 2000, ದಿನಾಂಕ: 11–05–2000 ರಲ್ಲಿ ಸಹ ತಮ್ಮ ಹೆಸರನ್ನು ಕ್ರ.ಸಂ. 3377 ರಲ್ಲಿ ತೋರಿಸಿ ದಿ: 17–05–80 ನ್ನು ಅರ್ಹತಾ ದಿನಾಂಕ ಎಂದೂ ಹಾಗೂ ಶ್ರೀ ಬಿ.ಸಿ. ಪಾಟೀಲ ಇವರ ಹೆಸರನ್ನು ಕ್ರ.ಸಂ. 3711 ರಲ್ಲಿ ತೋರಿಸಿ ಅವರಿಗೆ ದಿ: 10–09–81 ನ್ನು ಅರ್ಹತಾ ದಿನಾಂಕ ಎಂದು ನಿಗದಿಪಡಿಸಿರುತ್ತಾರೆ. ಅದರಂತೆಯೇ ಸರ್ಕಾರದ ಅಧಿಸೂಚನೆ ಸಂ.: ಕಂಇ 496 ಬಿಎಂಎಂ 2005, ದಿನಾಂಕ: 24–08–2006 ರಂದು ಪ್ರಕಟಿಸಿದ ರಾಜ್ಯಮಟ್ಟದ ಶಿರಸ್ತೇದಾರರ/ಉಪತಹಶೀಲ್ದಾರರ ಅಂತಿಮ ಜ್ಯೇಷ್ಠತಾ ಪಟ್ಟಿಯಲ್ಲಿ ಶ್ರೀ ಬಿ.ಸಿ. ಪಾಟೀಲ ಇವರಿಗೆ ಕ್ರ.ಸಂ. 3496 ರಲ್ಲಿ ದಿನಾಂಕ 11–07–80 ನ್ನು ಅರ್ಹತಾ ದಿನಾಂಕ ಎಂದು ನಿಗದಿಪಡಿಸಿದ್ದು, ತಮಗೆ ದಿನಾಂಕ: 11–05–2000 ರಲ್ಲಿ ಪ್ರಕಟಿಸಿದ ಜ್ಯೇಷ್ಠತಾ ಪಟ್ಟಿಯಲ್ಲಿ ನೀಡಲಾದ ಕ್ರ.ಸಂ. 3377 ಹಾಗೂ ಅರ್ಹತಾ ದಿನಾಂಕ: 17–05–2080 ನ್ನು ಹಾಗೆಯೇ ಮುಂದುವರಿಸಲಾಗಿದೆ ಎಂದೂ ತಿಳಿಸಿರುತ್ತಾರೆ.

ಆದರೆ ಸೇವಾ ಜೇಷ್ಠತೆಯಲ್ಲಿ ತಮಗಿಂತ ಕಿರಿಯರಾದ ಶ್ರೀ ಬಿ.ಸಿ. ಪಾಟೀಲ ಇವರಿಗೆ ಸರಕಾರದ ಅಧಿಸೂಚನೆ ಸಂ.: ಆರ್‌ಡಿ 30 ಎಟಿಎಸ್ 92, ದಿನಾಂಕ: 01–09–1993 ರಡಿ ತಹಶೀಲ್ದಾರ್ ಗ್ರೇಡ್–2 ವೃಂದಕ್ಕೆ ಮತ್ತು ಸರಕಾರದ ಅಧಿಸೂಚನೆ ಸಂ.: ಆರ್‌ಡಿ 36 ಎಎಸ್‌ಡಿ 95 ದಿನಾಂಕ 22–11–95 ರಲ್ಲಿ ತಹಶೀಲ್ದಾರ್ ಗ್ರೇಡ್–1 ವೃಂದಕ್ಕೆ ಬಡ್ತಿ ನೀಡಿ ಆದೇಶ ಹೊರಡಿಸಿದ್ದಾರೆ.

ಈ ವಿಷಯಕ್ಕೆ ಸಂಬಂಧಿಸಿದಂತೆ, ಕರ್ನಾಟಕ ಆಡಳಿತ ನ್ಯಾಯ ಮಂಡಳಿ ಎದುರು ತಾವು ಸಲ್ಲಿಸಿದ್ದ ಅರ್ಜಿ ಸಂ.: 756–757/2000 ನೇದ್ದರಲ್ಲಿ ದಿನಾಂಕ: 27–02–2007 ರಲ್ಲಿ ನೀಡಿರುವ ತೀರ್ಮಾನದಲ್ಲಿ ಪ್ಯಾರಾ 6 ರಲ್ಲಿ ಈ ರೀತಿ ಅಭಿಪ್ರಾಯ ಪಟ್ಟಿರುತ್ತಾರೆ.

'Therefore, the Tribunal is of the views that it would be appropriate in the interest of justice to dispose of these applications reserving liberty to such of those applicants whose grievances persist even after the publication of subsequent seniority list in the cadre of Shirastedars to take step to file fresh application if need be. The applicants are also reserved liberty to approach the statutory Authorities if they

are entitled to any other reliefs other than the claims made in the applications by giving proper representations under acknowledgements'.

ಈ ನಿರ್ದೇಶನಗಳ ಹಿನ್ನೆಲೆಯಲ್ಲಿ ತಾವು ಸಲ್ಲಿಸಿರುವ ಮನವಿಯಲ್ಲಿ ವಿನಂತಿಸಿದಂತೆ, ಸೇವಾ ಹಿರಿತನದಲ್ಲಿ ತಮಗಿಂತ ಕಿರಿಯರಾದ ಶ್ರೀ ಬಿ.ಸಿ. ಪಾಟೀಲ ಇವರಿಗೆ ಬಡ್ತಿ ನೀಡಲಾದ ದಿನಾಂಕಗಳಿಂದಲೇ ತಮಗೂ ತಹಶೀಲ್ದಾರ್ ಗ್ರೇಡ್–2 ಮತ್ತು ತಹಶೀಲ್ದಾರ್ ಗ್ರೇಡ್–1 ವೃಂದದಲ್ಲಿ ಪೂರ್ವಾನ್ವಯವಾಗುವಂತೆ ಬಡ್ತಿ ನೀಡಿ ಆರ್ಥಿಕ ಸೌಲಭ್ಯ ಒದಗಿಸಲು ಕೋರಿರುತ್ತಾರೆ.

ಶ್ರೀ ವ್ಹಿ.ಎಸ್. ಜೋಶಿ ಇವರು ಸಲ್ಲಿಸಿರುವ ಮನವಿಯಲ್ಲಿ ಅದರಲ್ಲಿ ವಿವರಿಸಿದ ಎಲ್ಲ ವಿಷಯಗಳನ್ನು ಹಾಗೂ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ಅಭಿಪ್ರಾಯಗಳ ಹಿನ್ನೆಲೆಯಲ್ಲಿ ವಿವರವಾಗಿ ಪರಿಶೀಲಿಸಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವಾ ನಿಯಮಗಳು–ಎ) ಇವರು ಈ ಕೆಳಕಂಡಂತೆ ಅಭಿಪ್ರಾಯವನ್ನು ಸಹ ನೀಡಿರುತ್ತಾರೆ.

"ಕರ್ನಾಟಕ ರಾಜ್ಯ ಸಿವಿಲ್ ಸೇವಾ (ಮುಂಬಡ್ತಿ ವೇತನ ಮತ್ತು ಪಿಂಚಣಿ ಕ್ರಮ ಬದ್ಧತೆ) ಅಧಿನಿಯಮ 1973ರ ಸೆಕ್ಷನ್ 4ರನ್ವಯ ಒಂದು ವೃಂದದ ತಾತ್ಕಾಲಿಕ ಜ್ಯೇಷ್ಠತಾ ಪಟ್ಟಿಯ ಆಧಾರದ ಮೇಲೆ ಅದರ ಮುಂಬಡ್ತಿ ವೃಂದಕ್ಕೆ ಮುಂಬಡ್ತಿ ನೀಡಿದ ನಂತರ, ತಾತ್ಕಾಲಿಕ ಜ್ಯೇಷ್ಠತಾ ಪಟ್ಟಿಯನ್ನು ಅಂತಿಮಗೊಳಿಸಿದಲ್ಲಿ, ಆ ಜ್ಯೇಷ್ಠತಾ ಪಟ್ಟಿಯಲ್ಲಿ ಮುಂಬಡ್ತಿ ಹೊಂದಿದ ನೌಕರರು ಜೇಷ್ಠತೆಯಲ್ಲಿ ಕಿರಿಯರಾದಲ್ಲಿ ಮತ್ತು ಮುಂಬಡ್ತಿ ಹೊಂದದ ನೌಕರರು ಜ್ಯೇಷ್ಠತೆಯಲ್ಲಿ ಹಿರಿಯರಾದಲ್ಲಿ, ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ಅನುಸರಿಸಿ ನೀಡಿದ ಮುಂಬಡ್ತಿಗಳನ್ನು ಪುನರಾವಲೋಕನೆ ಮಾಡಿ, ಜೇಷ್ಠತೆಯಲ್ಲಿ ಹಿರಿಯರಾದ ಅಂತಹ ನೌಕರರುಗಳಿಗೆ, ಜೇಷ್ಠತೆಯಲ್ಲಿ ಕಿರಿಯರಾದ ನೌಕರರುಗಳು ಮುಂಬಡ್ತಿ ಹೊಂದಿದ ದಿನಾಂಕದಂದು, ಅವರುಗಳು ಮುಂಬಡ್ತಿ ಹೊಂದಲು ಅರ್ಹರಾಗಿದ್ದಲ್ಲಿ ಮತ್ತು ಸೂಕ್ತರಾಗಿದ್ದಲ್ಲಿ ಅವರುಗಳಿಗೆ ಭವಿಷ್ಯವರ್ತಿಯಾಗಿ ಜಾರಿಗೆ ಬರುವಂತೆ ಮುಂಬಡ್ತಿ ನೀಡಿ ಅವರಿಗಿಂತ ಜೇಷ್ಠತೆಯಲ್ಲಿ ಕಿರಿಯರಾದ ನೌಕರರು ಮುಂಬಡ್ತಿ ಹೊಂದಿದ ದಿನಾಂಕವನ್ನು ಅರ್ಹತಾ ದಿನಾಂಕವೆಂದು (Deemed date of eligibility) ನಿಗದಿಪಡಿಸಬೇಕಾಗಿರುತ್ತದೆ. ಈ ರೀತಿ ಅರ್ಹತಾ ದಿನಾಂಕವನ್ನು ನಿಗದಿಪಡಿಸಿ ಒಂದು ಆದೇಶ ಅಧಿಸೂಚನೆಯನ್ನು ಹೊರಡಿಸಬೇಕಾಗುತ್ತದೆ. ಈ ರೀತಿ ಮುಂಬಡ್ತಿ ನೀಡಿ ಅರ್ಹತಾ ದಿನಾಂಕವನ್ನು ನಿಗದಿ ಪಡಿಸಿದ ನಂತರ ಅವರುಗಳ ವೇತನವನ್ನು ಕಾಲ್ಪನಿಕವಾಗಿ ನಿಗದಿಪಡಿಸಲು ಆಸ್ಪದ ಇರುತ್ತದೆ. ಅರ್ಹತಾ ದಿನಾಂಕದ ಆಧಾರದ ಮೇಲೆ ವೇತನವನ್ನು ಕಾಲ್ಪನಿಕವಾಗಿ ನಿಗದಿ ಪಡಿಸಿದಾಗ ಅಂತಹ ನೌಕರರುಗಳು ವೇತನ ಬಾಕಿಗೆ ಅರ್ಹರಾಗುವುದಿಲ್ಲ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 338 ಎಎಸ್‌ಡಿ 2009, ಬೆಂಗಳೂರು, ದಿನಾಂಕ : 08–04–2010**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ, ಸರ್ಕಾರವು ಶ್ರೀ ವ್ಹಿ.ಎಸ್. ಜೋಶಿ, ನಿವೃತ್ತ ತಹಶೀಲ್ದಾರ್ ಇವರಿಗೆ, ಇವರಿಗಿಂತ ಸೇವಾ ಜೇಷ್ಠತೆಯಲ್ಲಿ ಕಿರಿಯರಾದ ಶ್ರೀ ಬಿ.ಸಿ. ಪಾಟೀಲ ಇವರಿಗೆ ಸರ್ಕಾರದ ಅಧಿಸೂಚನೆ ಸಂ. ಆರ್‌ಡಿ 30 ಎಟಿಎಸ್ 92, ದಿನಾಂಕ: 01–09–1993 ರಲ್ಲಿ ತಹಶೀಲ್ದಾರ್ ಗ್ರೇಡ್–2 ವೃಂದಕ್ಕೆ ಬಡ್ತಿ ನೀಡಿದ ದಿನಾಂಕದಿಂದ, ಶ್ರೀ ವ್ಹಿ.ಎಸ್. ಜೋಶಿ ಇವರಿಗೂ ಸಹ ಅದೇ ದಿನಾಂಕ: 01–09–93 ನ್ನು ತಹಶೀಲ್ದಾರ್ ಗ್ರೇಡ್–2 ವೃಂದದ ಅರ್ಹತಾ ದಿನಾಂಕ (Deemed Date of eligibility) ಎಂದು ನಿಗದಿಪಡಿಸಲಾಗಿದೆ.

ಅದೇ ರೀತಿಯಾಗಿ ಸರಕಾರದ ಅಧಿಸೂಚನೆ ಕ್ರ.ಸಂ. ಆರ್‌ಡಿ 36 ಎಎಸ್‌ಡಿ 95, ದಿನಾಂಕ: 22–11–95 ರಲ್ಲಿ ಶ್ರೀ ಬಿ.ಸಿ. ಪಾಟೀಲ ಇವರಿಗೆ ತಹಶೀಲ್ದಾರ್ ಗ್ರೇಡ್–1 ವೃಂದಕ್ಕೆ ಅರ್ಹತಾ ದಿನಾಂಕ ನೀಡಿ ಆದೇಶಿಸಿದ ದಿನಾಂಕದಿಂದ ಸೇವಾ ಜೇಷ್ಠತೆಯಲ್ಲಿ ಅವರಿಗಿಂತ ಹಿರಿಯರಾದ ಶ್ರೀ ವ್ಹಿ.ಎಸ್. ಜೋಶಿ ಇವರಿಗೂ ಸಹ ತಹಶೀಲ್ದಾರ್ ಗ್ರೇಡ್–1 ವೃಂದದಲ್ಲಿ ದಿನಾಂಕ: 22–11–95 ನ್ನು ಅರ್ಹತಾ ದಿನಾಂಕ (Deemed date of Eligibility) ನಿಗದಿಪಡಿಸಿ ಆದೇಶಿಸಲಾಗಿದೆ.

ಆ ಆದೇಶವು ಮುಂದಿನ ರಾಜ್ಯ ಮಟ್ಟದ ತಹಶೀಲ್ದಾರ್ ಗ್ರೇಡ್–II ಮತ್ತು ಗ್ರೇಡ್–I ಅಂತಿಮ ಜೇಷ್ಠತಾ ಪಟ್ಟಿಯನ್ನು ಪರಿಷ್ಕರಿಸಿ ಹೊರಡಿಸುವ ಆದೇಶಕ್ಕೆ ಒಳಪಟ್ಟಿರುತ್ತದೆ.

ಶ್ರೀ ವ್ಹಿ.ಎಸ್. ಜೋಶಿ, ನಿವೃತ್ತ ತಹಶೀಲ್ದಾರ್ ಇವರ ವೇತನವನ್ನು ಕಾಲ್ಪನಿಕವಾಗಿ ನಿಗದಿಪಡಿಸುವುದು ಹಾಗೂ ಸದರಿಯವರು ವೇತನ ಬಾಕಿಗೆ ಅರ್ಹರಿರುವುದಿಲ್ಲ.

ಆ ಆದೇಶವನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವಾ ನಿಯಮಗಳು–ಎ) ಇವರ ಅನಧಿಕೃತ ಟಿಪ್ಪಣಿ ಸಂ.: ಸಿಆಸುಇ 529 ಸೇನಿಎ 2009, ದಿನಾಂಕ: 12–01–2010 ರಲ್ಲಿ ನೀಡಿರುವ ಅಭಿಪ್ರಾಯದ ಅನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1069

**ಎಸ್.ಬಿ. ಸಸಾಲಟ್ಟಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಸೇವೆಗಳು–3)

## WATER RESOURCES SECRETARIAT

Subject:- According Administrative Approved to the Minor Irrigation Projects under Accelerated Irrigation Benefit Programme-Regarding.

Read:- Letter No. CEMI (S) TA-2/AE5/AIBP/2009-10/514 dated: 20-04-2010 from the Chief Engineer, Minor Irrigation South Zone, Bangalore.

**Preamble:**

As per the modified quidelines issued by the Government of India. Minor Irrigation schemes with potential of more than 50 hectares which serve tribal areas and drought prone areas in the non-special category States are eligible for inclusion under Accelerated Irrigation Programme (AIBP) effective from December 2006. Karnataka State is classified as one of the non-special category States. 81 lakhs in the State are approved under Drought prone Area Programme (DPAP). Minor Irrigation schemes with potential more than 50 hectares in these 81 taluks are eligible for inclusion under Accelerated Irrigation Benefit Programme (AIBP). Central Assistance will be in the form of Central Grant that will be 90% of the project cost. The balance cost of the project will have to borne by the State as State's share.

Government of Karnataka has identified new Minor Irrigation Schemes in these taluks for seeking Government of India approval under AIBP. Finance Department, Government of Karnataka has also approved the proposal of the Water Resources Department (Minor Irrigation) for according approval to such schemes. The Chief Engineer. Minor Irrigation South Zone in the letter read above has requested for according administrative approval to the estimates of the works proposed under AIBP. Accordingly the following schemes in DPAP taulks are being considered for according administrative approval.

Head of Account: 4702-00-101-1-10-139 AIBP Major Works Amount Rs. In lakhs.

| Sl. No. | Name of the Scheme | District | Taluk | Estimated cost | Potential planned in Ha. | Cost per Ha. |
|---|---|---|---|---|---|---|
| 1 | 2 | 3 | 4 | 5 | 6 | 7 |
| 1 | Construction of barrage (Anicut across Vedavthi river near Nagagondana hally | Chitradurga | Challakere | 371.00 | 249.00 | 1.49 |
| 2 | Construction of barrage across Ranikere kodihall near Vishveshwaraiah pura village | Chitradurga | Challakere | 100.00 | 180.00 | 0.56 |
| | **Total** | | | **471.00** | | |

**Government Order No. SANEEYEE 236 MASAVI 2009 (2) Bangalore, dated: 23-04-2010**

In view of the above, the Administrative approval is hereby accorded for taking up the above 2 works with an estimated cost totaling to Rs. 471.00 lakhs (Four hundred and seventy one lakhs only) subject to the following conditions.

1. Implementation of these projects should be taken up only after receipt of necessary approval from the GOI.
2. The projects are to be completed with in a period of 2 years after receipt of approval of Government of India to these schemes.
3. The funding of the scheme is in the ratio of 90:10 between the Central Govt. and State Govt.
4. The Central share is in the form of grant to the State.
5. The projects will be implemented by the Water Resources Department (Minor Irrigation) as per the KTPP act.
6. The implementation of the project shall adhere to the terms and conditions of the guidelines issued by the GOI.

7. The implementation of the project shall be as per the required technical specifications and financial specifications as per the approved DPRs.

8. Water users association shall be formed for post construction maintainance and the scheme shall be handed over to the same after its construction for the O & M.

This Order is issued with the concurrence of Finance Department in their note No. PWD-890-FC-1/2009 dated 09-12-2009.

By Order and in the Name of Governor of Karnataka
K. SUDHAKARA SHETTY
Under Secretary to Government
Water Resources Department (Minor Irrigation)

PR No. 1070

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** ಮಹಾತ್ಮ ಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ ಕರ್ನಾಟಕ ಇದರ ಕಾರ್ಯಕ್ರಮಗಳನ್ನು 2010–11ನೇ ಸಾಲಿನಲ್ಲಿ ಮುಂದುವರೆಸುವ ಬಗ್ಗೆ.

**ಉಲ್ಲೇಖ :** ಸರ್ಕಾರದ ಪ್ರಧಾನ ಕಾರ್ಯದರ್ಶಿ, ಗ್ರಾಅಪಂರಾಜ್ ಇಲಾಖೆರವರ ಟಿಪ್ಪಣಿ ಸಂ.ಗ್ರಾಅಪ. 28. ಯೋಉಮಾ. 2010 ದಿನಾಂಕ: 05–04–2010.

**ಪ್ರಸ್ತಾವನೆ:–**

ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರು ಉಲ್ಲೇಖಿತ ಟಿಪ್ಪಣಿಯಲ್ಲಿ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಗಳ ಕಾರ್ಯಕ್ರಮಗಳನ್ನು 2010–11ನೆ ಸಾಲಿಗೆ ಮುಂದುವರೆಸಲು ಮಂಜೂರಾತಿಯನ್ನು ನೀಡಿದ್ದು, ಈ ಪೈಕಿ ಮಹಾತ್ಮ ಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯು ಒಂದಾಗಿರುತ್ತದೆ. ಯೋಜನೆಯ ಮುಂದುವರಿಕೆ ಆದೇಶವನ್ನು ಹೊರಡಿಸುವ ಮುನ್ನ ಆಂತರಿಕ ಆರ್ಥಿಕ ಸಲಹೆಗಾರರ ಸಹಮತಿಯನ್ನು ಪಡೆಯಲು ಸೂಚಿಸಿರುತ್ತಾರೆ.

ಮಹಾತ್ಮ ಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯನ್ನು ದಿನಾಂಕ: 02–02–2006 ರಿಂದ, ಹಂತ ಹಂತವಾಗಿ ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ ಅನುಷ್ಠಾನಗೊಳಿಸಲಾಗುತ್ತಿದೆ. ಸದರಿ ಯೋಜನೆಯ ಅನುಷ್ಠಾನದಲ್ಲಿ ಶೇಕಡಾ 60:40ರ ಅನುಪಾತದಲ್ಲಿ ಕೂಲಿ ಮತ್ತು ಸಾಮಗ್ರಿಗಳ ಘಟಕವನ್ನು ನಿರ್ವಹಿಸಲಾಗುತ್ತಿದೆ. ಇದರಲ್ಲಿ ಕೂಲಿಯ ಭಾಗವನ್ನು ಸಂಪೂರ್ಣವಾಗಿ ಕೇಂದ್ರ ಸರ್ಕಾರವೇ ಭರಿಸುತ್ತದೆ ಮತ್ತು ಸಾಮಗ್ರಿ ಘಟಕದ ಭಾಗವನ್ನು ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಶೇಕಡ 75:25ರ ಅನುಪಾತದಲ್ಲಿ ಹಂಚಿಕೊಂಡು ಯೋಜನೆಯನ್ನು ನಿರ್ವಹಿಸಲಾಗುತ್ತಿದೆ. ಸದರಿ ಯೋಜನೆಯ ಬೇಡಿಕೆ ಆಧಾರಿತ ಕಾರ್ಯಕ್ರಮವಾಗಿರುವುದರಿಂದ ಹಾಗೂ ರಾಜ್ಯ ಮಟ್ಟದಲ್ಲಿ ರಾಜ್ಯ ಉದ್ಯೋಗ ಖಾತರಿ ನಿಧಿಯನ್ನು ಸ್ಥಾಪಿಸಿರುವುದರಿಂದ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಒದಗಿಸಿರುವ ಅನುದಾನವನ್ನು ರಾಜ್ಯದ ನಿಧಿಗೆ ಜಮೆ ಮಾಡಿಕೊಂಡು ಪಂಚಾಯತ್ ರಾಜ್ ಸಂಸ್ಥೆಗಳಿಗೆ ಬಿಡುಗಡೆ ಮಾಡುವ, ಮಾರ್ಗಸೂಚಿಗಳನ್ನು ವಿಧಿಸಿರುವ ನಿಬಂಧನೆಗಳಿಗೆ ಹಾಗೂ ಕಾರ್ಮಿಕ ಮುಂಗಡ ಪತ್ರದ ಅನುಮೋದನೆಗೆ ಒಳಪಟ್ಟು ಮುಂದುವರೆಸಿಕೊಂಡು ಹೋಗುವ ಅವಶ್ಯಕತೆ ಇರುವುದರಿಂದ, ಈ ಕೆಳಗಿನಂತೆ, ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಅದೇಶ ಸಂಖ್ಯೆ : ಗ್ರಾಅಪ 87 : ಉಖಾಯೋ: 2010 ಬೆಂಗಳೂರು, ದಿನಾಂಕ : 20ನೇ ಏಪ್ರಿಲ್ 2010**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ, ಕೇಂದ್ರ ಪುರಸ್ಕೃತ ಯೋಜನೆಯಾದ ಮಹಾತ್ಮ ಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ – ಕರ್ನಾಟಕ ಇದನ್ನು ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ 2010–11ನೇ ಸಾಲಿನಲ್ಲಿ ಅನುಷ್ಠಾನಗೊಳಿಸುವ ಸಲುವಾಗಿ, ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಬೇಡಿಕೆಯ ಆಧಾರದ ಮೇಲೆ ಬಿಡುಗಡೆ ಮಾಡುವ ಅನುದಾನ, ಕಾರ್ಮಿಕ ಮುಂಗಡ ಪತ್ರದ ಆಯವ್ಯಯದ ಅನುಮೋದನೆಯ ನಿಬಂಧನೆಗಳಿಗೆ ಮತ್ತು ರಾಜ್ಯದ ಪಾಲನ್ನು 2010–11ನೇ ಸಾಲಿನಲ್ಲಿ ರಾಜ್ಯದ ಆಯವ್ಯಯದ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಈ ಕೆಳಕಂಡ ಎರಡು ಲೆಕ್ಕಶೀರ್ಷಿಕೆಗಳಲ್ಲಿ ಒದಗಿಸಲಾದ ಅನುದಾನದಿಂದ ಭರಿಸುವ ನಿಬಂಧನೆಗಳಿಗೆ ಒಳಪಟ್ಟು 2010–11ನೇ ಸಾಲಿನಲ್ಲಿ ಮುಂದುವರೆಸುವುದಕ್ಕೆ ಸರ್ಕಾರವು ಅನುಮೋದನೆ ನೀಡಿದೆ.

ಆ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರ ಟಿಪ್ಪಣಿ ಸಂ.ಗ್ರಾಅಪ. 100 ಪಿಬಿಎಸ್. 2010 ದಿನಾಂಕ: 15–04–2010 ರಲ್ಲಿ ಸಹಮತಿಸಿದಂತೆ ಹೊರಡಿಸಿದೆ.

(ರೂ. ಲಕ್ಷಗಳಲ್ಲಿ)

| | |
|---|---|
| 1. ರಾಜ್ಯ ವಲಯ ಯೋಜನೆಗಳು<br>ಕರ್ನಾಟಕ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ರಾಜ್ಯ ಕೋಶ<br>2505–02–101–0–01 | 130.00<br>(ರಾಜ್ಯದ ಪಾಲು) |
| 2. ಜಿಲ್ಲಾ ವಲಯ ಯೋಜನೆಗಳು<br>ಕರ್ನಾಟಕ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ (MNREGA)<br>2505–60–196–6–04–300 | 14352.71<br>(ರಾಜ್ಯದ ಪಾಲು) |
| **3. ಒಟ್ಟು ಮೊತ್ತ** | **14482.71** |

ಪಿ.ಆರ್. 1071

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎನ್.ಎಸ್. ಪ್ರಸನ್ನಕುಮಾರ್**
ನಿರ್ದೇಶಕರು
ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ
ಹಾಗೂ ಪದ ನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** 2010–11ನೇ ಸಾಲಿಗೆ ಸುವರ್ಣ ಗ್ರಾಮೋದಯ ಯೋಜನೆಯನ್ನು ಮುಂದುವರಿಸುವ ಬಗ್ಗೆ.

**ಪ್ರಸ್ತಾವನೆ :**

ಕರ್ನಾಟಕ ರಾಜ್ಯದ ಪುನರ್ ರಚನೆಯ ಸುವರ್ಣ ಮಹೋತ್ಸವದ ಅಂಗವಾಗಿ 2006–07ನೇ ಸಾಲಿನಲ್ಲಿ ಸರ್ವಾಂಗೀಣ ಅಭಿವೃದ್ಧಿ ಉದ್ದೇಶ ಹೊಂದಿದ ವಿನೂತನ ಗ್ರಾಮೀಣಾಭಿವೃದ್ಧಿ ಯೋಜನೆಯನ್ನು ಸುವರ್ಣ ಗ್ರಾಮೋದಯ ಯೋಜನೆ ಎಂಬ ಹೆಸರಿನಲ್ಲಿ ಹಮ್ಮಿಕೊಳ್ಳಲಾಗಿದೆ. ಈ ಯೋಜನೆಯನ್ನು ಪ್ರಸ್ತುತ ಸಾಲಿಗೂ ಸಹ ಮುಂದುವರಿಸಿದೆ. ರಾಜ್ಯದ ಎಲ್ಲಾ ಜಿಲ್ಲೆಗಳಿಂದ 1ನೇ ಹಂತದ ಯೋಜನೆಯಡಿ ಆಯ್ಕೆಯಾದ 1204 ಗ್ರಾಮಗಳಲ್ಲಿ ಮತ್ತು ಗುಲ್ಬರ್ಗಾ ಕಂದಾಯ ವಿಭಾಗದ 5 ಜಿಲ್ಲೆಗಳಲ್ಲಿ 2ನೇ ಹಂತದ ಯೋಜನೆಯಡಿ ಆಯ್ಕೆಯಾದ 222 ಗ್ರಾಮಗಳಲ್ಲಿ ಸುವರ್ಣ ಗ್ರಾಮೋದಯ ಯೋಜನೆಯನ್ನು ಅನುಷ್ಠಾನಗೊಳಿಸಲಾಗುತ್ತಿದೆ. ರಾಜ್ಯದ ಎಲ್ಲಾ ಜಿಲ್ಲೆಗಳಿಂದ 3ನೇ ಹಂತದ ಯೋಜನೆಯಡಿ ಆಯ್ಕೆಯಾದ 1548 ಗ್ರಾಮಗಳ ಗ್ರಾಮೀಣಾಭಿವೃದ್ಧಿ ಯೋಜನೆಯು ಅನುಮೋದನೆಗೊಂಡು ಅನುಷ್ಠಾನ ಹಂತದಲ್ಲಿರುತ್ತದೆ ಹಾಗೂ ಗುಲ್ಬರ್ಗಾ ಕಂದಾಯ ವಿಭಾಗದ 4ನೇ ಹಂತದ ಸುಮಾರು 200 ಗ್ರಾಮಗಳ ಆಯ್ಕೆ ಪ್ರಕ್ರಿಯೆ ಪ್ರಗತಿಯಲ್ಲಿರುತ್ತದೆ. 2006–07ನೇ ಸಾಲಿನಿಂದ ಪ್ರಾರಂಭವಾಗಿರುವ ಸುವರ್ಣ ಗ್ರಾಮೋದಯ ಯೋಜನೆಯ ಮೊದಲನೇ ಹಂತದ ಯೋಜನೆಯು ಸೇರಿದಂತೆ ನಾಲ್ಕು ಹಂತಗಳ ಯೋಜನೆಯನ್ನು 2010–11ನೇ ಸಾಲಿನಲ್ಲಿ ಅನುಷ್ಠಾನಗೊಳಿಸಬೇಕಾಗಿರುತ್ತದೆ. ಸುವರ್ಣ ಗ್ರಾಮೋದಯ ಯೋಜನೆಯ ಅನುಷ್ಠಾನಕ್ಕಾಗಿ ಆರ್ಥಿಕ ಇಲಾಖೆಯು 2010–11ನೇ ಸಾಲಿನ ಆಯವ್ಯಯದಲ್ಲಿ ರೂ. 400.00 ಕೋಟಿಗಳನ್ನು ನಿಗದಿಗೊಳಿಸಿದೆ. ಯೋಜನೆಯ ಅನುಷ್ಠಾನಕ್ಕಾಗಿ ಕಾರ್ಯಕ್ರಮದ ಮುಂದುವರಿಕೆ ಆದೇಶ ಹೊರಡಿಸುವುದು ಅಗತ್ಯವಿರುತ್ತದೆ. ಪ್ರಯುಕ್ತ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ: 46: ಸುಗ್ರಾಯೋ 2008, ಬೆಂಗಳೂರು, ದಿನಾಂಕ : 21–04–2010**

ಪ್ರಸ್ತಾವನೆಯಲ್ಲಿ ವಿವರಿಸಲಾದಂತೆ ಸುವರ್ಣ ಗ್ರಾಮೋದಯ ಯೋಜನೆಯ ಮೊದಲನೇ ಹಂತದಲ್ಲಿ ಆಯ್ಕೆಯಾಗಿರುವ 1204 ಗ್ರಾಮಗಳಲ್ಲಿ 2ನೇ ಹಂತದಲ್ಲಿ ಆಯ್ಕೆಯಾಗಿರುವ 222 ಗ್ರಾಮಗಳಲ್ಲಿ ಮತ್ತು 3ನೇ ಹಂತದಲ್ಲಿ ಆಯ್ಕೆಯಾಗಿರುವ 1548 ಗ್ರಾಮಗಳಲ್ಲಿ ಹಾಗೂ 4ನೇ ಹಂತದಡಿ ಆಯ್ಕೆಯಾಗಲಿರುವ ಗ್ರಾಮಗಳಲ್ಲಿ ಮುಂದುವರಿದ ಸುವರ್ಣ ಗ್ರಾಮೋದಯ ಯೋಜನೆಯನ್ನು ಅನುಷ್ಠಾನಗೊಳಿಸಲು 2010–11ನೇ ಸಾಲಿಗೆ ಮುಂದುವರಿಸಲಾಗಿದೆ. ಸದರಿ ಯೋಜನೆಗೆ 2010–11ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕ ಶೀರ್ಷಿಕೆ 4215–02–800–0–02–132 (ಬಂಡವಾಳ ವೆಚ್ಚಗಳು)ರಡಿ ರೂ. 262.80 ಕೋಟಿ, 4215–02–800–0–02–422 (ವಿಶೇಷ ಘಟಕ ಯೋಜನೆ)ರಡಿ ರೂ. 97–02 ಕೋಟಿ ಮತ್ತು 4215–

02–800–0–02–423 (ಗಿರಿಜನ ಉಪಯೋಜನೆ) ರಡಿ ರೂ. 40.18 ಕೋಟಿ ಅನುದಾನವನ್ನು ಒಟ್ಟಾರೆ ರೂ. 400.00 ಕೋಟಿಗಳನ್ನು ಒದಗಿಸಲಾಗಿದೆ.

2010–11ನೇ ಸಾಲಿಗೆ ಒದಗಿಸಿರುವ ಆಯವ್ಯಯದ ಮೇರೆಗೆ ಮತ್ತು ವಿಧಿಸಬಹುದಾದ ಷರತ್ತುಗಳಿಗೊಳಪಟ್ಟು ಪ್ರಸ್ತುತ ಸಾಲಿನಲ್ಲಿ ಈ ಮುಂದುವರಿದ ಯೋಜನೆಯನ್ನು ಕಾರ್ಯಗತ ಮಾಡಲು ಆದೇಶಿಸಲಾಗಿದೆ.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯವರ ಟಿಪ್ಪಣಿ ಸಂಖ್ಯೆ ಗ್ರಾಅಪ : 98 : ಪಿಬಿಎಸ್ : 2010 ದಿನಾಂಕ: 15–04–2010ರಲ್ಲಿ ನೀಡಿರುವ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1072

**ಪಿ.ಎ. ಮೇಘಣ್ಣವರ**
ನಿರ್ದೇಶಕರು, ಗ್ರಾಮೂಸೌ ಮತ್ತು
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ

## FINANCE SECRETARIAT

**Sub :** Chief Minister's Relief Fund Rules 1958-Amendment regarding.

**Read :** 1. Govt. Order No. FD 23 TAR 2009 dated: 29-09-2009.
2, Govt. Order No. FD 23 TAR 2009 dated: 07-10-2009.
3. Govt. Order No. FD 23 TAR 2009 dated: 05-12-2009.
4. File No. RD 158 TNR 2010 of Revenue Department.

**Preamble :-**

In the Govt. Order read at (1) above sanction has been accorded to open the head of account "8235-00-111-0-02-Public Contribution to the Calamity Relief" in all the Treasuries of the State to facilitate crediting the contribution received towards "Calamity Relief Fund of Karnataka".

In the Govt. Order read at (2) above, it has been indicated that the "Calamity Relief Fund of the Karnataka" under the head of account "8235-00-111-0-02-Public Contribution to the Calamity Relief" is administered and shall be part of the Chief Minister's Relief Fund. In the Govt. Order read at (3) above, Chief Minister's Relief Fund Rules 1958 has been revised. As per these revised rules, contributions received for the Chief Minister's Relief Fund towards Calamity Relief uner the head of account "8235-00-111-0-02 Public Conributions to the Calamity Relief" will be operated by the Secretary to Government (Disaster Management), Revenue Department, who has been designated as the Nodal Officer for Managing the receipts and expenditure out of the public contributions to the Chief Minister's Relief Fund towards Calamity Relief. The Secretary to Govt., (Disaster Management), Revenue Department is required to transfer funds out of "8235-00-111-0-02-Public Contributions to the Calamity Relief" to the concerned Deputy Commissioner with the approval of Chief Minsiter for payments to implementing agencies for services rendered or supplies made.

In the File No. RD 158 TNR 2010 read at (4) above, the Secretary to Chief Minister has stated that the Karnataka Housing Board, Rajiv Gandhi Rural Housing Corporation and Karnataka Land Army Corporation have taken up construction of houses under Asare (ಆಸರೆ) Scheme on behalf of donors and also from Karnataka Calamity Relief Fund for which Hon'ble Chief Minister has approved the proposal. To avoid delay in releasing of the amount from "Calamity Relief Fund" he has requested to amend Govt. Order No. FD 23 TAR 2009 dated: 5-12-2009 suitably to enable the Secretary to Govt. (Disaster Management), Revenue Department to release the amounts required for construction of houses under Asare (ಆಸರೆ) Scheme directly to the Karnataka Housing Board, Rajiv Gandhi Rural Housing Corporation and Karnataka Land Army Corpora;tion after approval of the Hon'ble Chief Minister.

The proposal has been examined and hence this Order.

**Government Order No. FD 23 TAR 2009, Bangalore, Dated : 06-04-2010**

The following sentence may be added as second para in para 3(ii) of Govt. Order No. FD 23 TAR 2009 dated: 5-12-2009.

"However in respect of construction of houses under Asare (ಆಸರೆ) Scheme, the Secretary to Govt. (Disaster Management) Revenue Department may transfer the funds out of "8235-00-111-0-02-Public Contributions to Calamity Relief" directly to the Karnataka Housing Board, Rajiv Gandhi Rural Housing Corporation and Karnataka Land Army Corporation after obtaining the approval of Chief Minister".

By Order and in the name of the Governor of Karnataka

**(C. Shamarao)**
Deputy Secretary to Government
Finance Department
(FR & BCC)

PR NO. 1073

**ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ**

**ವಿಷಯ :** ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ (ಎಸ್‌ಜಿಎಸ್‌ವೈ) ಹಾಗೂ ಡಿಆರ್‌ಡಿಎ ಆಡಳಿತ ಕಾರ್ಯಕ್ರಮಗಳನ್ನು 2010–11ನೇ ಸಾಲಿನಲ್ಲಿ ಮುಂದುವರೆಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಟಿಪ್ಪಣಿ ಸಂಖ್ಯೆ : ಗ್ರಾಅಪ 28 ಯೋಉಮಾ 2010 ದಿನಾಂಕ : 05–04–2010

**ಪ್ರಸ್ತಾವನೆ :**

ಮೇಲೆ ಓದಲಾದ ಟಿಪ್ಪಣಿಯಲ್ಲಿ 2009–10ನೇ ಸಾಲಿನಲ್ಲಿ ಅನುಷ್ಠಾನಗೊಂಡ ಇಲಾಖೆಯ ಎಲ್ಲಾ ಕಾರ್ಯಕ್ರಮಗಳನ್ನು ಮುಂದುವರೆಸಲಾಗಿದೆ. 2010–11ನೇ ಸಾಲಿಗೆ ಮುಂದುವರೆಸಲು ಮಂಜೂರಾತಿ ಆದೇಶವನ್ನು ನೀಡಲು ಈ ಇಲಾಖೆಯ ಪ್ರಧಾನ ಕಾರ್ಯದರ್ಶಿಗಳು ಸೂಚಿಸಿರುತ್ತಾರೆ. ಇದರಂತೆ, 2009–2010ನೇ ಸಾಲಿಗೆ ಸ್ವಉದ್ಯೋಗ ಕಾರ್ಯಕ್ರಮ ಶಾಖೆಯಲ್ಲಿ ಅನುಷ್ಠಾನಗೊಳಿಸಿದ ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ (ಎಸ್‌ಜಿಎಸ್‌ವೈ) ಹಾಗೂ ಡಿಆರ್‌ಡಿಎ ಆಡಳಿತ ಕಾರ್ಯಕ್ರಮಗಳನ್ನು 2010–2011ನೇ ಸಾಲಿಗೆ ಮುಂದುವರಿಸಬೇಕಾಗಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 9 ಎಸ್‌ಜಿವೈ 2010, ಬೆಂಗಳೂರು, ದಿನಾಂಕ : 20–04–2010**

ಸ್ವಉದ್ಯೋಗ ಕಾರ್ಯಕ್ರಮ ಶಾಖೆಯಲ್ಲಿ ಅನುಷ್ಠಾನಗೊಳಿಸಲಾಗುತ್ತಿರುವ ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ (ಎಸ್‌ಜಿಎಸ್‌ವೈ) ಹಾಗೂ ಡಿಆರ್‌ಡಿಎ ಆಡಳಿತ ಕಾರ್ಯಕ್ರಮಗಳನ್ನು ಕೇಂದ್ರ ಸರ್ಕಾರವು ಈ ಯೋಜನೆಗೆ ನಿಗದಿಪಡಿಸಬಹುದಾದ ಅನುದಾನ ಹಾಗೂ ವಿಧಿಸಬಹುದಾದ ಷರತ್ತುಗಳಿಗೆ ಒಳಪಟ್ಟು 2010–2011ನೇ ಸಾಲಿಗೆ ಮುಂದುವರೆಸಲು ಸರ್ಕಾರವು ಮಂಜೂರಾತಿ ನೀಡಿದೆ.

2010–2011ನೇ ಸಾಲಿನಲ್ಲಿ ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ (ಎಸ್‌ಜಿಎಸ್‌ವೈ) ಹಾಗೂ ಡಿಆರ್‌ಡಿಎ ಆಡಳಿತ ಕಾರ್ಯಕ್ರಮಗಳನ್ನು ಈ ಕೆಳಕಂಡ ಲೆಕ್ಕ ಶೀರ್ಷಿಕೆಯಲ್ಲಿ ಭರಿಸತಕ್ಕದ್ದು.

**ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ (ಎಸ್‌ಜಿಎಸ್‌ವೈ) ಲೆಕ್ಕ ಶೀರ್ಷಿಕೆ :** "2501 ಗ್ರಾಮೀಣಾಭಿವೃದ್ಧಿಗಾಗಿ ವಿಶೇಷ ಕಾರ್ಯಕ್ರಮಗಳು 01 ಸಮಗ್ರ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು–198–ಗ್ರಾಮ ಪಂಚಾಯತ್‌ಗಳಿಗೆ ಸಹಾಯ–6–ಗ್ರಾಮ ಪಂಚಾಯತ್‌ಗಳು–01–ಬ್ಲಾಕ್ ಅನುದಾನ ಕೇಂದ್ರ ಪುರಸ್ಕೃತ ಯೋಜನೆ (ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ) 2010–2011 (2501–01–198–6–01)" (ಲಿಂಕ್‌ಕೋಡ್ 2501–01–800–0–07)

**ಡಿಆರ್‌ಡಿಎ (ಆಡಳಿತ) (ಜಿಲ್ಲಾವಲಯ) ಲೆಕ್ಕ ಶೀರ್ಷಿಕೆ :** "2515 ಇತರೆ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು 00–196–ಜಿಲ್ಲಾ ಪಂಚಾಯತ್‌ಗಳಿಗೆ ಸಹಾಯ–6–ಜಿಲ್ಲಾ ಪಂಚಾಯತ್–06–ಡಿಆರ್‌ಡಿಎ ಆಡಳಿತಾತ್ಮಕ ವೆಚ್ಚ (ಕೇಂದ್ರ ಪುರಸ್ಕೃತ ಯೋಜನೆ) 2010–2011 (2515–00–196–6–06)".

**ಡಿಆರ್‌ಡಿಎ (ಆಡಳಿತ) ರಾಜ್ಯ ಕೋಶ ಲೆಕ್ಕ ಶೀರ್ಷಿಕೆ :** "2515 ಇತರೆ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು 00–800–ಇತರೆ ವೆಚ್ಚಗಳು–0–08 ಜಿಲ್ಲಾ ಗ್ರಾಮೀಣಾಭಿವೃದ್ಧಿ ಏಜೆನ್ಸಿ (ಎಸ್‌ಇಪಿ) ಯೋಜನೆ 2010–2011 (2515–00–800–0–08)".

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ ಇವರ ಸಹಮತಿ ಸಂಖ್ಯೆ : ಗ್ರಾಅಪ 99 ಪಿಬಿಎಸ್ 2010 ದಿನಾಂಕ : 15-04-2010ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1086

**ಪಿ.ಎ. ಮೇಘಣ್ಣವರ**
ನಿರ್ದೇಶಕರು (ಸ್ವಉಕಾ) ಹಾಗೂ
ಪ.ನಿ. ಸರ್ಕಾರದ ಜಂಟಿ ಕಾರ್ಯದರ್ಶಿ
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ

## ಸಹಕಾರ ಸಚಿವಾಲಯ

**ವಿಷಯ :** ದಿನಾಂಕ : 31-03-2010ರೊಳಗೆ ನಡೆಸಬೇಕಾಗಿರುವ ದಿ ವೈಯಾಲಿಕಾವಲ್ ಹೌಸ್ ಬಿಲ್ಡಿಂಗ್ ಕೋ-ಆಪರೇಟಿವ್ ಸೊಸೈಟಿ ನಿ., ಬೆಂಗಳೂರು ಇದರ ಆಡಳಿತ ಸಮಿತಿ ಚುನಾವಣೆಯನ್ನು ಮುಂದೂಡುವ ಬಗ್ಗೆ.

**ಓದಲಾಗಿದೆ :** ಅಧ್ಯಕ್ಷರು, ದಿ ವೈಯಾಲಿಕಾವಲ್ ಹೌಸ್ ಬಿಲ್ಡಿಂಗ್ ಕೋ-ಆಪರೇಟಿವ್ ಸೊಸೈಟಿ ನಿ., ಬೆಂಗಳೂರು ಇವರ ಪತ್ರ ದಿನಾಂಕ : 23-02-2010.

**ಪ್ರಸ್ತಾವನೆ:-**

ದಿ ವೈಯಾಲಿಕಾವಲ್ ಹೌಸ್ ಬಿಲ್ಡಿಂಗ್ ಕೋ-ಆಪರೇಟಿವ್ ಹೌಸ್ ಬಿಲ್ಡಿಂಗ್ ಸಂಘವು ನ್ಯಾಯಾಲಯಗಳ ಆದೇಶದಂತೆ ಕಳೆದುಕೊಂಡಿರುವ ಜಮೀನುಗಳಿಗೆ ಬದಲಿ ಜಮೀನುಗಳನ್ನು ಪಡೆಯಲು ಸರ್ಕಾರದಲ್ಲಿ ಬಾಕಿ ಇರುವ ಸಂಘದ ಕೋರಿಕೆ ಸಂಘದ ಅಂತಸ್ತು ಮನೆಗಳ ನಿರ್ಮಾಣ ಕಾರ್ಯ ಇನ್ನಿತರ ಯೋಜನೆಗಳು ಪ್ರಗತಿಯಲ್ಲಿದ್ದು, ಈ ಯೋಜನೆಗಳನ್ನು ಮುಕ್ತಾಯಗೊಳಿಸಿ ಸಂಘದ ಸದಸ್ಯರಿಗೆ ನಿವೇಶನ ಹಂಚುವುದು ಅಥವಾ ಸಂಘದ ವಿರುದ್ಧ ಗ್ರಾಹಕರ ವೇದಿಕೆಗಳು ಸದಸ್ಯರ ನಿವೇಶನ ಠೇವಣಿ ಹಿಂತಿರುಗಿಸುವಂತೆ ನೀಡಿರುವ ಆದೇಶಗಳ ಪಾಲನೆ ಮುಂತಾದವು ಇರುವುದರಿಂದ ಸದರಿ ಯೋಜನೆಗಳನ್ನು ಪೂರ್ಣಗೊಳಿಸಲು ಎರಡು ವರ್ಷಗಳ ಅವಧಿಯು ಅವಶ್ಯಕವಾಗಿರುತ್ತದೆ ಎಂದು ತಿಳಿಸಿ ಸಂಘದ ಸದಸ್ಯರ ಹಿತದೃಷ್ಟಿಯಿಂದ ಸಂಘದ ಆಡಳಿತ ಸಮಿತಿ ಸದಸ್ಯರ ಚುನಾವಣೆಯನ್ನು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕಾರ ಎರಡು ವರ್ಷಗಳ ಕಾಲ ಮುಂದೂಡಿ ದಿನಾಂಕ : 31-03-2012ರ ಒಳಗಾಗಿ ನಡೆಸಲು ಅನುಮತಿ ನೀಡಬೇಕಾಗಿ ಮೇಲೆ ಓದಲಾದ ಪತ್ರದಲ್ಲಿ ಕೋರಿರುತ್ತಾರೆ.

ಸದರಿ ಪ್ರಸ್ತಾವವನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಅದೇಶ ಸಂಖ್ಯೆ : ಸಿಒ 77 ಸಿಎಲ್‌ಎಂ 2010, ಬೆಂಗಳೂರು, ದಿನಾಂಕ : 30-03-2010**

ದಿ ವೈಯಾಲಿಕಾವಲ್ ಹೌಸ್ ಬಿಲ್ಡಿಂಗ್ ಕೋ-ಆಪರೇಟಿವ್ ಸೊಸೈಟಿ ನಿ., ಬೆಂಗಳೂರು ಇದಕ್ಕೆ ಅನ್ವಯವಾಗುವಂತೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 39ಎ(4) ಮತ್ತು 121ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸದರಿ ಅಧಿನಿಯಮದ ಪ್ರಕರಣ 28ಎ(4), 28ಎ(5), 28ಬಿ(2), 29ಎಫ್(4) ಮತ್ತು 39ಎ(2) ಅನ್ನು ಮಾರ್ಪಾಟು ಮಾಡಿ ಸದರಿ ಬ್ಯಾಂಕಿನ ಆಡಳಿತ ಸಮಿತಿಗೆ ಚುನಾವಣೆಯನ್ನು ದಿನಾಂಕ : 30-09-2010ರೊಳಗೆ ನಡೆಸುವಂತೆ ಆದೇಶಿಸುತ್ತದೆ.

**ಸೂಚನೆ :** ಪ್ರಕರಣ 28ಎ(4), 28ಎ(5), 28ಬಿ(2), 29ಎಫ್(4) ಮತ್ತು 39ಎ(2)ಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ : 30-09-2010ರ ವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿಯು ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ ಪ್ರಕರಣಗಳ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು. ಈ ಆದೇಶದ ಮೂಲಕ ಮಾರ್ಪಾಡು ಮಾಡಿದಂತೆ ಸದರಿ ಪ್ರಕರಣದ ಹಿಂದಿನ ಕಾರ್ಯಾಚರಣೆ ಮೇಲೆ ಯಾವುದೇ ಪರಿಣಾಮ ಉಂಟು ಮಾಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1087

ಆರ್.ಎಸ್. ಹುಚ್ಚಾಚಾರಿ
ವಿಶೇಷ ಕರ್ತವ್ಯಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ
ಸಹಕಾರ ಇಲಾಖೆ

**ಒಳಾಡಳಿತ ಸಚಿವಾಲಯ**

**ವಿಷಯ :** ಭಟ್ಕಳದಲ್ಲಿ ನಡೆದ ಘಟನೆಗಳ ಬಗ್ಗೆ ವಿಚಾರಣೆ ನಡೆಸಲು ರಚಿಸಿದ ನ್ಯಾಯಮೂರ್ತಿ ಕೆ. ಜಗನ್ನಾಥಶೆಟ್ಟಿ ವಿಚಾರಣಾ ಆಯೋಗದ ವರದಿ ಕುರಿತು.

**ಉಲ್ಲೇಖ :** ಸರ್ಕಾರದ ಅಧಿಸೂಚನೆ ಸಂಖ್ಯೆ : ಹೆಚ್‌ಡಿ 43 ಪಿಸಿಇ 1993, ದಿನಾಂಕ : 16–09–1993.

**ಪ್ರಸ್ತಾವನೆ:–**

ಮೇಲೆ ಓದಲಾದ ಅಧಿಸೂಚನೆಯಲ್ಲಿ ಭಟ್ಕಳದಲ್ಲಿ ನಡೆದ ಘಟನೆಗಳ ಬಗ್ಗೆ ವಿಚಾರಣೆ ನಡೆಸಲು ನ್ಯಾಯಮೂರ್ತಿ ಕೆ. ಜಗನ್ನಾಥಶೆಟ್ಟಿ, ನಿವೃತ್ತ ನ್ಯಾಯಾಧೀಶರು, ಕರ್ನಾಟಕ ಉಚ್ಚ ನ್ಯಾಯಾಲಯ ಇವರನ್ನೊಳಗೊಂಡ ಒಂದು ಏಕ ಸದಸ್ಯ ವಿಚಾರಣಾ ಆಯೋಗವನ್ನು ರಚಿಸಲಾಗಿತ್ತು. ಸದರಿ ಆಯೋಗವು ಸರ್ಕಾರಕ್ಕೆ ದಿನಾಂಕ : 27–02–1997ರಂದು ವಿಚಾರಣೆ ನಡೆಸಿ, ವರದಿಯನ್ನು ಸಲ್ಲಿಸಿರುತ್ತಾರೆ.

ಸರ್ಕಾರಕ್ಕೆ ಸಲ್ಲಿಸಿರುವ ಆಯೋಗದ ವರದಿಯನ್ನು ಒಪ್ಪಿಕೊಳ್ಳಲಾಗಿದೆ ಹಾಗೂ ವಿಚಾರಣಾ ಆಯೋಗಗಳ ಅಧಿನಿಯಮ 1952ರ ಉಪ ನಿಯಮ 3(4)ರನ್ವಯ ಆಯೋಗದ ವರದಿಯ ಪ್ರತಿಗಳನ್ನು ವಿಧಾನ ಮಂಡಲದ ಉಭಯ ಸದನದಲ್ಲಿ ಮಂಡಿಸಲು ಸಹ ಸರ್ಕಾರವು ಒಪ್ಪಿರುತ್ತದೆ.

ಅದರಂತೆ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 7 ಪಿಸಿಇ 2009, ಬೆಂಗಳೂರು, ದಿನಾಂಕ : 18–03–2010**

ಕರ್ನಾಟಕ ಸರ್ಕಾರವು ಈ ಕೆಳಕಂಡ ಅಂಶಗಳಿಗೆ ಅನುಮೋದನೆ ನೀಡಿದೆ.

i. ನ್ಯಾಯಮೂರ್ತಿ ಕೆ. ಜಗನ್ನಾಥಶೆಟ್ಟಿ ವಿಚಾರಣಾ ಆಯೋಗದ ವರದಿಯನ್ನು ಒಪ್ಪಿಕೊಳ್ಳಲಾಗಿದೆ.
ii. ಆಯೋಗದ ಪ್ರತಿಕೂಲ ತೀರ್ಮಾನಗಳಂತೆ ಸಂಬಂಧಪಟ್ಟ ಇಲಾಖೆಯ ಅಧಿಕಾರಿ : ನೌಕರರ ವಿರುದ್ಧ ಶಿಸ್ತಿನ ಕ್ರಮ ತೆಗೆದುಕೊಳ್ಳಲು ಸಂಬಂಧಪಟ್ಟ ಇಲಾಖೆಗಳಿಗೆ ನಿರ್ದೇಶಿಸಲಾಗಿದೆ.
iii. ಪೊಲೀಸ್ ಕಾಯ್ದೆ, ನಿಯಮ, ಪೊಲೀಸ್ ಮ್ಯಾನ್ಯುಯಲ್, ಇತ್ಯಾದಿಗೆ ತಿದ್ದುಪಡಿ ಮಾಡಲು ಆಯೋಗ ಮಾಡಿರುವ ಶಿಫಾರಸ್ಸುಗಳನ್ನು ಪರೀಕ್ಷಿಸಲು ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾನಿರೀಕ್ಷಕರು, ಬೆಂಗಳೂರು ರವರಿಗೆ ನಿರ್ದೇಶಿಸಲಾಗಿದೆ.
iv. ವಿಚಾರಣಾ ಆಯೋಗಗಳ ಅಧಿನಿಯಮ 1952ರ ಉಪ ನಿಯಮ 3(4)ರನ್ವಯ ಆಯೋಗದ ವರದಿಯ ಪ್ರತಿಗಳನ್ನು ವಿಧಾನ ಮಂಡಲದ ಉಭಯ ಸದನಗಳಲ್ಲಿ ಮಂಡಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1088

**ಕೆ.ಸಿ. ಸಿದ್ದಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ
(ಕಾನೂನು ಮತ್ತು ಸುವ್ಯವಸ್ಥೆ, ಕಾಫಿಪೋಸಾ ಮತ್ತು ಅಭಿಯೋಗಗಳು)

**HEALTH AND FAMILY WELFARE SECRETARIAT**

**No. HFW 02 FPE 2010, Bangalore, dated : 15-03-2010**

**CORRIGENDUM**

**Sub :** Constitution of Additional Authorisation Committee for Transplantation of Human Organs in Manipal Hospital, Bangalore.

In Government Order No. HFW 02 FPE 2010, dated : 2-2-2010, for Sl.No. 1 of the Order portion, the following shall be substituted :-

"1. Dr. Nagendra Swamy S.C.
Medical Superintendent,
M/s, Manipal Hospital,
HAL, Airport Road,
Bangalore. - Member".

By Order and in the name of the Governor of Karnataka

PR NO. 1089

**Chikke Gowda**
Under Secretary to Government
Health and Family Welfare Department

## ಶಿಕ್ಷಣ ಸಚಿವಾಲಯ

**ವಿಷಯ :** ಡಿ.ಇಡಿ ಕೋರ್ಸಿನ ದ್ವಿತೀಯ ವರ್ಷದ ವಿದ್ಯಾರ್ಥಿಗಳಿಗೆ ಪೂರಕ ಪರೀಕ್ಷೆ ನಡೆಸುವ ಕುರಿತು.

**ಓದಲಾಗಿದೆ :** ದಿನಾಂಕ : 19-03-2010ರ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ ಹಾಗೂ ಅಧ್ಯಕ್ಷರು, ಕರ್ನಾಟಕ ಪ್ರೌಢಶಿಕ್ಷಣ ಪರೀಕ್ಷಾ ಮಂಡಳಿ, ಬೆಂಗಳೂರು ಇವರ ಪತ್ರ ಸಂಖ್ಯೆ : ಕ್ಯೂ 2/ಡಿ.ಇಡಿ/ಪೂ.ಒ/ಏ. 2010/19/2009-10.

**ಪ್ರಸ್ತಾವನೆ :**

1. ಪ್ರಸ್ತುತ, ಪ್ರಥಮ ಡಿ.ಇಡಿ ಕೋರ್ಸಿನಲ್ಲಿ ಅನುತ್ತೀರ್ಣರಾದ ವಿದ್ಯಾರ್ಥಿಗಳಿಗೆ ಪೂರಕ ಪರೀಕ್ಷೆ ತೆಗೆದುಕೊಳ್ಳಲು ಅವಕಾಶವಿರುತ್ತದೆ. ಆದರೆ, ದ್ವಿತೀಯ ಡಿ.ಇಡಿ ಕೋರ್ಸಿನಲ್ಲಿ ಅನುತ್ತೀರ್ಣರಾದ ವಿದ್ಯಾರ್ಥಿಗಳಿಗೆ ಪೂರಕ ಪರೀಕ್ಷೆ ನಡೆಸುತ್ತಿಲ್ಲದಿರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ.

2. ಮೇಲೆ ಓದಲಾದ ಪತ್ರದಲ್ಲಿ 2010ರ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ ಹಾಗೂ ಅಧ್ಯಕ್ಷರು, ಕರ್ನಾಟಕ ಪ್ರೌಢಶಿಕ್ಷಣ ಪರೀಕ್ಷಾ ಮಂಡಳಿ, ಬೆಂಗಳೂರು, ಇವರು ದ್ವಿತೀಯ ಡಿ.ಇಡಿ ಪರೀಕ್ಷೆಯಲ್ಲಿ ಅನುತ್ತೀರ್ಣರಾದ 7927 ವಿದ್ಯಾರ್ಥಿಗಳಿಗೆ ದಿನಾಂಕ 19-04-2010ರಿಂದ ಪೂರಕ ಪರೀಕ್ಷೆ ನಡೆಸಲು ಸರ್ಕಾರದ ಆದೇಶ ಕೋರಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

3. ಸದರಿ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ ಇಡಿ 82 ಪಿಟಿಐ 2010, ಬೆಂಗಳೂರು, ದಿನಾಂಕ 20-03-2010**

4. ಸರ್ಕಾರಿ ಹಾಗೂ ಸರ್ಕಾರದಿಂದ ಮಾನ್ಯತೆ ಪಡೆದ ಶಿಕ್ಷಕರ ತರಬೇತಿ ಸಂಸ್ಥೆಗಳಲ್ಲಿ 2009-10ನೇ ಶೈಕ್ಷಣಿಕ ಸಾಲಿನಲ್ಲಿ ದ್ವಿತೀಯ ಡಿ.ಇಡಿ ಕೋರ್ಸಿನಲ್ಲಿ ಅನುತ್ತೀರ್ಣರಾದ (ಪುನರಾವರ್ತಿತ ಅಭ್ಯರ್ಥಿಗಳಿಗೆ ಮಾತ್ರ) ಹಾಗೂ ಸದರಿ ಸಾಲಿನಲ್ಲಿ ಗೈರು ಹಾಜರಾದ ವಿದ್ಯಾರ್ಥಿಗಳಿಗೆ ಪ್ರಥಮ ಡಿ.ಇಡಿ. ಪರೀಕ್ಷೆ ಆದ ಮೇಲೆ ಹಾಗೂ ಅರ್ಜಿ ಸಲ್ಲಿಸಲು ಸಾಕಷ್ಟು ಸಮಯಾವಕಾಶ ನೀಡಿ ನಿಗದಿತ ಪರೀಕ್ಷಾ ಶುಲ್ಕವನ್ನು ವಸೂಲಿ ಮಾಡಿಕೊಂಡು ಪೂರಕ ಪರೀಕ್ಷೆ ನಡೆಸಲು ಈ ಮೂಲಕ ಆದೇಶಿಸಲಾಗಿದೆ.

ಈ ಆದೇಶವು ಮುಂದಿನ ಸಾಲುಗಳ ಪೂರಕ ಪರೀಕ್ಷೆಗಳಿಗೂ ಸಹ ಅನ್ವಯವಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1090

**ಎಂ.ಎನ್. ಸೋಮಶೇಖರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಶಿಕ್ಷಣ ಇಲಾಖೆ

## HOME SECRETARIAT

**No. HD 231 SST 2009, Bangalore, Dated : 5-03-2010**

**ORDER**

Whereas the Government of Karnataka having regard to the circumstances prevailing in the State is satisfied that it is necessary that all Commissioners of Police and all the District Magistrates should be empowered to exercise the powers under sub-section (2) of Section 3 of the Karnataka Prevention of Dangerous Activities of Boot-leggers, Drug-offenders, Gamblers, Goondas, Immoral Traffic Offenders and Slum-Grabbers Act, 1985 (Karnataka Act No. 12 of 1985)

Now, therefore in exercise of the powers conferred by Sub-Section (2) of Section 3 of the Karnataka Prevention of Dangerous Activities of Boot-leggers, Drug-offenders, Gamblers, Goondas, Immoral Traffic Offenders and Slum-Grabbers Act, 1985 the Government of Karnataka hereby direct that all the Commissioners of Police and all the District Magistrates in the State shall exercise the powers conferred by sub-section (1) of Section 3 within the limits of their jurisdiction for a period of three months from 11-03-2010 to 08-06-2010.

By Order and in the name of the Governor of Karnataka

PR NO. 1091

**K.C. Siddappa**
Under Secretary to Government
Home Department
(Law and Order, Cofeposa and Prosecution)

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ಚಿಕ್ಕಮಗಳೂರು ಜಿಲ್ಲೆ, ಕಡೂರು ತಾಲ್ಲೂಕು, ಬಿಸಿಲೆಕೆರೆ ಬಾಸೂರು ಹತ್ತಿರ ಇಂಗುಕೆರೆ ನಿರ್ಮಾಣ ಕಾಮಗಾರಿಯ ಟೆಂಡರ್ ಅನುಮೋದನೆ ಕುರಿತು.

**ಓದಲಾಗಿದೆ** : 1. ಸರ್ಕಾರದ ಆದೇಶ ಸಂಖ್ಯೆ : ಸನೀಇ 10 ನಯೋಕಾ 2007 ದಿನಾಂಕ:13-05-2008.

**2.** ದಿನಾಂಕ 25-03-2010ರ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರುರವರ ಪತ್ರದ ಸಂಖ್ಯೆ : ಮುಸದ/ತಾಂ.2/ಸಇ2/ಚಿಕ್ಕಮಗಳೂರು/ಇ-ಟೆಂಡರ್ : 119/2009-10/1191.

**3.** ದಿನಾಂಕ : 05-04-2010ರ ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು ರವರ ದಿನಾಂಕ 24-02-2010ರ ಪತ್ರ ಸಂಖ್ಯೆ : ಮುಸದ/ಆಪ್ತಶಾಖೆ/ಟೆಂಡರ್/09-10/1455.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಹೆಚ್ಚಿನ ಆತ್ಮಹತ್ಯೆಗಳು ವರದಿಯಾಗಿರುವ ಜಿಲ್ಲೆಗಳಲ್ಲಿ ರೈತರ ಪುನರ್ವಸತಿಗಾಗಿ ವಿಶೇಷ ಪ್ಯಾಕೆಜಿನಡಿ ರೂ. 9036.00 ಲಕ್ಷ ಮೊತ್ತದಲ್ಲಿ 162 ಕಾಮಗಾರಿಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡಲಾಗಿದ್ದು ಈ ಪೈಕಿ ರೂ. 118.00 ಅಂದಾಜು ಮೊತ್ತದ ಚಿಕ್ಕಮಗಳೂರು ಜಿಲ್ಲೆ, ಕಡೂರು ತಾಲ್ಲೂಕು, ಬಿಸಿಲೆಕೆರೆ ಬಾಸೂರು ಹತ್ತಿರ ಇಂಗುಕೆರೆ ನಿರ್ಮಾಣ (ಈ ಕಾಮಗಾರಿಯ ಹೆಸರನ್ನು ಅನುಮೋದಿತ ಪಟ್ಟಿಯಲ್ಲಿ Reconst. of breached Hosakere near Bislekere Basooru ಎಂದು ತಿಳಿಸಿದೆ) ಕಾಮಗಾರಿಯು ಸೇರಿರುತ್ತದೆ. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರುರವರು ನೋಂದಣಿ ಸಂಖ್ಯೆ 453/2008-09ರಲ್ಲಿ ರೂ. 86.00 ಲಕ್ಷ ಮೊತ್ತಕ್ಕೆ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಹಾಸನ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ-ಪ್ರಕ್ಯೂರ್‌ಮೆಂಟ್ ಮುಖಾಂತರ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ಜಿಲ್ಲಾ ಟೆಂಡರ್ ಬುಲೆಟಿನ್ | 24-08-2009 |
| ಕರ್ನಾಟಕ ರಾಜ್ಯ ಪತ್ರ | 27-08-2009 |
| ವಿಜಯ ಕರ್ನಾಟಕ ದಿನ ಪತ್ರಿಕೆ | 29-08-2009 |
| ಡೆಕ್ಕನ್ ಹೆರಾಲ್ಡ್ ದಿನ ಪತ್ರಿಕೆ | 29-08-2009 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ 18 ಜನ ಗುತ್ತಿಗೆದಾರರು ಇ-ಪ್ರೊಕ್ಯೂರ್‌ಮೆಂಟ್ ವೆಬ್ ಸೈಟ್ ಮೂಲಕ ಟೆಂಡರ್ ಭರಿಸಿರುತ್ತಾರೆ. ಇವರಲ್ಲಿ 12 ಜನ ಗುತ್ತಿಗೆದಾರರು ಇ.ಎಂ.ಡಿ. ಸಲ್ಲಿಸದ ಕಾರಣ ಇವರುಗಳ ಟೆಂಡರ್ ತಿರಸ್ಕರಿಸಿದ್ದು, ಉಳಿದ 6 ಜನ ಗುತ್ತಿಗೆದಾರರು ತಾಂತ್ರಿಕ ಬಿಡ್ ನಲ್ಲಿ ಭಾಗವಹಿಸಿದ್ದು ಇವರಲ್ಲಿ 5 ಜನ ಗುತ್ತಿಗೆದಾರರು ಅನರ್ಹರಾದ ಕಾರಣ ಕ್ರಮಬದ್ಧವಾದ ಒಬ್ಬ ಗುತ್ತಿಗೆದಾರರ ಆರ್ಥಿಕ ಬಿಡ್‌ಗಳನ್ನು ಪರಿಗಣಿಸಲಾಗಿದೆ. ಸದರಿ ಗುತ್ತಿಗೆದಾರರು ಅರ್ಹರೆಂದು ಪರಿಗಣಿಸಿ ಇವರ ಆರ್ಥಿಕ ಬಿಡ್‌ಗಳನ್ನು ತೆರೆಯಲಾಗಿದೆ. ವಿವರಗಳು ಕೆಳಕಂಡಂತಿವೆ.

| | |
|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | ರೂ. 84,71,767/- |
| ಸಿಮೆಂಟ್ ಹಾಗು ಉಕ್ಕಿಗೆ ಪ್ರಸಕ್ತ ಮಾರುಕಟ್ಟೆ ದರಗಳನ್ನು ಪರಿಗಣಿಸಿದಂತೆ ಪರಿಷ್ಕೃತ ಟೆಂಡರಿಗೆ ಇಡಲಾದ ಮೊತ್ತ | ರೂ. 84,48,013/- |

| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ | ಪರಿಷ್ಕೃತ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
|---|---|---|---|---|
| 1 | ಹೆಚ್. ಎಂ. ರಾಮೇಗೌಡ 1ನೇ ದರ್ಜೆ ಗುತ್ತಿಗೆದಾರರು | 93,08,678/- | 9.87 ಹೆಚ್ಚು | 10.188 ಹೆಚ್ಚು |

ಮೇಲ್ಕಂಡಂತೆ ಏಕೈಕ ಅರ್ಹ ಟೆಂಡರ್‌ದಾರರಾದ ಶ್ರೀ ಹೆಚ್.ಎಂ.ರಾಮೇಗೌಡ, 1ನೇ ದರ್ಜೆ ಗುತ್ತಿಗೆದಾರರು ಇವರು ನಮೂದಿಸಿರುವ ದರಗಳಂತೆ ಟೆಂಡರ್ ಮೊತ್ತವು ರೂ. 93,08,678/–ಗಳಾಗಿದ್ದು, ಇದನ್ನು ಪ್ರಸಕ್ತ ಸಾಲಿನ ದರಗಳಿಗೆ ಪರಿಗಣಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇ. 10.188ರಷ್ಟು ಹೆಚ್ಚಾಗಿರುತ್ತದೆ. ಸದರಿಯವರ ಟೆಂಡರನ್ನು ಸಂದಾನದ ಮೂಲಕ ಅಂಗೀಕರಿಸಲು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್‌ರವರು ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಅವರೊಂದಿಗೆ ಸಂಧಾನ ನಡೆಸಲು ದಿನಾಂಕ : 05–04–2010ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಮಂಜೂರಾದ ಅಂದಾಜಿನ ದರಗಳ ಹಾಗೂ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳಿಗೆ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 84,48,013/–ಗಳ ಮೇಲೆ ಶೇಕಡ 10.00ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 92,92,814/–ಗಳಿಗೆ ಕಾಮಗಾರಿಯನ್ನು ಶ್ರೀ ಹೆಚ್.ಎಂ. ರಾಮೇಗೌಡ, ಒಂದನೇ ದರ್ಜೆ ಗುತ್ತಿಗೆದಾರರು, ಇವರಿಗೆ ವಹಿಸಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 3ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸನೀಇ 06 ಹೊಕೆನಿ 2010, ಬೆಂಗಳೂರು, ದಿನಾಂಕ : 24–04–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಚಿಕ್ಕಮಗಳೂರು ಜಿಲ್ಲೆ, ಕಡೂರು ತಾಲ್ಲೂಕು, ಬಿಸಿಲೆಕೆರೆ ಬಾಸೂರು ಹತ್ತಿರ ಇಂಗುಕೆರೆ ನಿರ್ಮಾಣ ಕಾಮಗಾರಿಯನ್ನು ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗಿಡಲಾದ ಮೊತ್ತ ರೂ. 84,48,013/–ಗಳ ಮೇಲೆ ಶೇಕಡ 10.00ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 92,92,814/–ಗಳಿಗೆ (ತ್ತೊಂಬತ್ತೆರಡು ಲಕ್ಷದ ತ್ತೊಂಬತ್ತ ಎರಡು ಸಾವಿರದ ಎಂಟುನೂರ ಹದಿನಾಲ್ಕು ರೂ.ಗಳು ಮಾತ್ರ) ಶ್ರೀ ಹೆಚ್.ಎಂ. ರಾಮೇಗೌಡ, ಒಂದನೇ ದರ್ಜೆ ಗುತ್ತಿಗೆದಾರರು, ಇವರಿಗೆ ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ : 20–01–2003 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1111

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**ಜಲ ಸಂಪನ್ಮೂಲ ಸಚಿವಾಲಯ**

**ವಿಷಯ :** ದಾವಣಗೆರೆ ಜಿಲ್ಲೆ, ದಾವಣಗೆರೆ ತಾಲ್ಲೂಕು, ಅಗಸನಕಟ್ಟೆ ಕೆರೆ ಆಧುನೀಕರಣ ಕಾಮಗಾರಿಯ ಟೆಂಡರ್ ಅನುಮೋದನೆ ಕುರಿತು.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ : ಸನೀಇ 14 ಮಸಾವಿ 2009(2) ದಿನಾಂಕ : 04–02–2009.
2. ದಿನಾಂಕ 26–03–2010ರ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರುರವರ ಪತ್ರದ ಸಂಖ್ಯೆ : ಮುಸದ/ತಾಂ.4/ಸಇಂ. 10/ಚಿತ್ರದುರ್ಗ/ದಾವಣಗೆರೆ/ಅಗಸನಕಟ್ಟೆ/2009–10/1217.
3. ದಿನಾಂಕ : 09–04–2010ರ ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ (ದಕ್ಷಿಣ) ವಲಯ, ಬೆಂಗಳೂರು ರವರ ಪತ್ರ ಸಂಖ್ಯೆ : ಮುಸದ/ಆಪ್ತ ಶಾಖೆ/ಟೆಂಡರ್/09–10/1405.

**ಪ್ರಸ್ತಾವನೆ:–**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಲೆಕ್ಕ ಶೀರ್ಷಿಕೆ 4702–00–101–1–07–139 ಕೆರೆಗಳ ಆಧುನೀಕರಣ (ಪ್ರಧಾನ ಕಾಮಗಾರಿಗಳು) ಅಡಿಯಲ್ಲಿ ಒಟ್ಟು ರೂ. 480.00 ಲಕ್ಷ ಮೊತ್ತದಲ್ಲಿ 10 ಕಾಮಗಾರಿಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡಲಾಗಿದ್ದು, ಈ ಪೈಕಿ ರೂ. 80.00 ಲಕ್ಷ ಅಂದಾಜು ಮೊತ್ತದ ದಾವಣಗೆರೆ ಜಿಲ್ಲೆ, ದಾವಣಗೆರೆ ತಾಲ್ಲೂಕು, ಅಗಸನಕಟ್ಟೆ ಕೆರೆ ಆಧುನೀಕರಣ ಸೇರಿರುತ್ತದೆ. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರುರವರ ನೋಂದಣಿ ಸಂಖ್ಯೆ 03/2009–10ರಲ್ಲಿ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಚಿತ್ರದುರ್ಗ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ದ್ವಿಲಕೋಟೆ ಪದ್ಧತಿಯಲ್ಲಿ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ರಾಜ್ಯ ಟೆಂಡರ್ ಬುಲೆಟಿನ್ | ದಿನಾಂಕ 16–10–2009 |
| ಡೆಕ್ಕನ್ ಹೆರಾಲ್ಡ್ ದಿನ ಪತ್ರಿಕೆ | ದಿನಾಂಕ 22–10–2009 |
| ವಿಜಯ ಕರ್ನಾಟಕ ದಿನ ಪತ್ರಿಕೆ | ದಿನಾಂಕ 23–10–2009 |

ಈ ಟೆಂಡರ್ ಕರೆಗೆ ಪ್ರತಿಕ್ರಿಯಿಸಿ ಒಟ್ಟು 9 ಜನ ಗುತ್ತಿಗೆದಾರರು ಖಾಲಿ ಟೆಂಡರ್ ಫಾರಂಗಾಗಿ ಅರ್ಜಿ ಸಲ್ಲಿಸಿ, ಟೆಂಡರ್ ಫಾರಂಗಳನ್ನು ಪಡೆದು ನಿಗಧಿತ ದಿನಾಂಕದಂದು 06 ಜನ ಗುತ್ತಿಗೆದಾರರು ಮಾತ್ರ ಟೆಂಡರ್‌ಗಳನ್ನು ಸಲ್ಲಿಸಿರುವುದಾಗಿ ವರದಿಯಾಗಿದೆ. ತಾಂತ್ರಿಕ ಬಿಡ್ ಗಳನ್ನು ದಿನಾಂಕ 25–01–2010 ರಂದು ತೆರೆಯಲಾಗಿದ್ದು ಇಬ್ಬರು ಗುತ್ತಿಗೆದಾರರು ಮಾತ್ರ ಅರ್ಹರೆಂದು ಇವರ ಆರ್ಥಿಕ ಬಿಡ್‌ಗಳನ್ನು ದಿನಾಂಕ 25–01–2010ರಲ್ಲಿ ತೆರೆದಿರುತ್ತಾರೆ.

| | | | |
|---|---|---|---|
| ಮಂಜೂರಾದ ಅಂದಾಜಿನ ದರಗಳಂತೆ ಹಾಗೂ ಸಿಮೆಂಟ್ ಮತ್ತು ಉಕ್ಕಿನ ಪ್ರಸಕ್ತ ಮಾರುಕಟ್ಟೆ ದರಗಳನ್ನು ಪರಿಗಣಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | ರೂ. 70,46,397/– | |
| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡವಾರು ಹೆಚ್ಚಳ/ಕಡಿಮೆ |
| 1. | ಜಿ.ಎಂ. ಉಜ್ಜಣ್ಣ, 1ನೇ ದರ್ಜೆ ಗುತ್ತಿಗೆದಾರರು | 80,63,689/– | 14.44 ಹೆಚ್ಚು |
| 2. | ಕೆ. ಸಿದ್ದಲಿಂಗಪ್ಪ, 1ನೇ ದರ್ಜೆ ಗುತ್ತಿಗೆದಾರರು | 81,36,624/– | 15.47 ಹೆಚ್ಚು |

ಮೇಲ್ಕಂಡಂತೆ ಶ್ರೀ ಜಿ.ಎಂ.ಉಜ್ಜಣ್ಣ, 1ನೇ ದರ್ಜೆ ಗುತ್ತಿಗೆದಾರರು, ಇವರು ಟೆಂಡರ್ ನಲ್ಲಿ ಭಾಗವಹಿಸಿರುವ ಗುತ್ತಿಗೆದಾರರ ಪೈಕಿ ಅತೀ ಕಡಿಮೆ ದರ ನೀಡಿರುವ ಟೆಂಡರ್‌ದಾರರಾಗಿದ್ದು ಇವರು ನಮೂದಿಸಿರುವ ದರಗಳಂತೆ ಟೆಂಡರ್ ಮೊತ್ತವು ರೂ. 80,63,689/–ಗಳಾಗಿದೆ. ಗುತ್ತಿಗೆದಾರರು ಟೆಂಡರ್‌ನಲ್ಲಿ ನಮೂದಿಸಿರುವ ದರಗಳನ್ನು ಪ್ರಸಕ್ತ ಸಾಲಿನ ದರಗಳಿಗೆ ಪರಿಗಣಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇ. 14.44ರಷ್ಟು ಹೆಚ್ಚಾಗಿರುತ್ತದೆ. ಈ ಟೆಂಡರನ್ನು ಅಂಗೀಕರಿಸಲು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್‌ರವರು ಅನುಮೋದನೆ ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 05–04–2010ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಮಂಜೂರಾದ ಅಂದಾಜಿನ ದರಗಳ ಹಾಗೂ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳಿಗೆ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 70,46,397/– ಗಳ ಮೇಲೆ ಶೇಕಡ 12.50ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 79,27,197/–ಗಳಿಗೆ ಕಾಮಗಾರಿಯನ್ನು ಶ್ರೀ ಜಿ.ಎಂ. ಉಜ್ಜಣ್ಣ, ಒಂದನೇ ದರ್ಜೆ ಗುತ್ತಿಗೆದಾರರು, ಇವರಿಗೆ ವಹಿಸಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 3ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಅದೇಶ ಸಂಖ್ಯೆ : ಸನೀಇ 24 ಕೆಜಿದು 2010 ಬೆಂಗಳೂರು, ದಿನಾಂಕ : 24ನೇ ಏಪ್ರಿಲ್ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ದಾವಣಗೆರೆ ಜಿಲ್ಲೆ, ದಾವಣಗೆರೆ ತಾಲ್ಲೂಕು, ಅಗಸನಕಟ್ಟೆ ಕೆರೆ ಆಧುನೀಕರಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳಿಗೆ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 70,46,397/–ಗಳ ಮೇಲೆ ಶೇಕಡ 12.50ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.79,27,197/–ಗಳಿಗೆ (ಎಪ್ಪತ್ತೊಂಬತ್ತು ಲಕ್ಷ ಇಪ್ಪತ್ತೇಳು ಸಾವಿರದ ನೂರತ್ತೊಂಬತ್ತೇಳು ರೂ.ಗಳು ಮಾತ್ರ) ಶ್ರೀ ಜಿ.ಎಂ.ಉಜ್ಜಣ್ಣ, ಒಂದನೇ ದರ್ಜೆ ಗುತ್ತಿಗೆದಾರರು, ಇವರಿಗೆ ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ : 20–01–2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1112

ಕೆ. ಸುಧಾಕರ ಶೆಟ್ಟಿ
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀ ಎನ್.ಎಂ. ನೀಲಕಂಠ, ಕೆಎಎಸ್ (ಕಿರಿಯ ಶ್ರೇಣಿ) ಹಿಂದಿನ ಕೇಂದ್ರ ಸ್ಥಾನಿಕ ಸಹಾಯಕರು, ಶ್ರೀ ಎನ್. ಪುಟ್ಟಸ್ವಾಮಿ, ಹಿಂದಿನ ಪುರಸಭಾ ತಹಶೀಲ್ದಾರ್, ಶ್ರೀ ಕೆ. ಎಂ. ಶಂಕರಯ್ಯ, ಹಿಂದಿನ ಶಿರಸ್ತೇದಾರರು ಮತ್ತು ಶ್ರೀ ಎಸ್. ಮಹದೇವಯ್ಯ, ಪ್ರಥಮ ದರ್ಜೆ ಸಹಾಯಕರು, ಜಿಲ್ಲಾಧಿಕಾರಿಗಳ ಕಛೇರಿ, ಚಾಮರಾಜನಗರ ಜಿಲ್ಲೆ, ಚಾಮರಾಜನಗರ – ಇವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ – ಅಂತಿಮ ಆದೇಶ.

**ಓದಲಾಗಿದೆ :**
1. ದಿನಾಂಕ : 08–04–08ರ ಆದೇಶ ಸಂಖ್ಯೆ : ಸಿಆಸುಇ 040 ಕೆಇವಿ 07.
2. ಶ್ರೀ ಸೋಸಲೆ ಇಂದುಧರ, ಜಿಲ್ಲಾ ನ್ಯಾಯಾಧೀಶರು (ನಿವೃತ್ತ) ಹಾಗೂ ವಿಚಾರಣಾಧಿಕಾರಿಗಳು ಇವರ ದಿನಾಂಕ : 9/15–04–09ರ ವಿಚಾರಣಾ ವರದಿ.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಶ್ರೀ ಎನ್.ಎಂ. ನೀಲಕಂಠ, ಕೆಎಎಸ್ (ಕಿರಿಯ ಶ್ರೇಣಿ), ಹಿಂದಿನ ಕೇಂದ್ರ ಸ್ಥಾನಿಕ ಸಹಾಯಕರು, ಶ್ರೀ ಎನ್. ಪುಟ್ಟಸ್ವಾಮಿ, ಹಿಂದಿನ ಪುರಸಭಾ ತಹಶೀಲ್ದಾರ್, ಶ್ರೀ ಕೆ. ಎಂ. ಶಂಕರಯ್ಯ, ಹಿಂದಿನ ಶಿರಸ್ತೇದಾರರು ಮತ್ತು ಶ್ರೀ ಎಸ್. ಮಹದೇವಯ್ಯ, ಹಿಂದಿನ ಪ್ರಥಮ ದರ್ಜೆ ಸಹಾಯಕರು, ಜಿಲ್ಲಾಧಿಕಾರಿಗಳ ಕಛೇರಿ, ಚಾಮರಾಜನಗರ ಜಿಲ್ಲೆ, ಚಾಮರಾಜನಗರ ಈ ಹುದ್ದೆಗಳಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಇವರುಗಳ ವಿರುದ್ಧ, ಕರ್ನಾಟಕ ನಾಗರೀಕ ಸೇವೆಗಳು (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 1957ರಡಿ ಜಿಲ್ಲಾಧಿಕಾರಿಗಳಿಗೆ ಪ್ರದತ್ತವಾದ ಅಧಿಕಾರವನ್ನು ತಾವೇ ಚಲಾಯಿಸಿ, ಶ್ರೀ ಪಿ. ನರಸಿಂಹಮೂರ್ತಿ, ದ್ವಿತೀಯ ದರ್ಜೆ ಸಹಾಯಕ, ನಗರ ಸಭೆ, ಚಾಮರಾಜನಗರ ಮತ್ತು ಇತರರ ವಿರುದ್ಧದ ಇಲಾಖಾ ವಿಚಾರಣೆಗೆ ಕಡತ ಸಂಖ್ಯೆ : ಪುರಸಭೆ 40/02–03 ರಲ್ಲಿ ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯನ್ನು ನೇಮಿಸುವ ಮೂಲಕ ಅಧಿಕಾರ ದುರುಪಯೋಗದ ಆರೋಪದಲ್ಲಿನ ಸತ್ಯಾಸತ್ಯತೆಯ ಬಗ್ಗೆ ಇಲಾಖಾ ವಿಚಾರಣೆ ನಡೆಸಿ ವರದಿ ಸಲ್ಲಿಸಲು ಶ್ರೀ ಎಸ್. ಇಂದೂಧರ, ನಿವೃತ್ತ ಜಿಲ್ಲಾ ಹಾಗೂ ಸತ್ರ ನ್ಯಾಯಾಧೀಶರು ರವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಕೇಂದ್ರ ಸ್ಥಾನಿಕ ಸಹಾಯಕರು, ಜಿಲ್ಲಾಧಿಕಾರಿಗಳ ಕಛೇರಿ, ಚಾಮರಾಜನಗರ ಜಿಲ್ಲೆ, ಚಾಮರಾಜನಗರ ರವರನ್ನು ಶಿಸ್ತು ಪ್ರಾಧಿಕಾರಿಯ ಪರವಾಗಿ ಮಂಡನಾಧಿಕಾರಿಯನ್ನಾಗಿ ಸರ್ಕಾರವು ನೇಮಿಸಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರಲ್ಲಿ ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸಲ್ಲಿಸಿದ್ದು, ಪೌರ ಸಿಬ್ಬಂದಿಯ ಶಿಸ್ತು ಕ್ರಮದಲ್ಲಿ ಜಿಲ್ಲಾಧಿಕಾರಿಗಳ ಮೌಖಿಕ ಸೂಚನೆಯ ಮೇರೆಗೆ ವಿಚಾರಣಾಧಿಕಾರಿ ಮತ್ತು

ಮಂಡನಾಧಿಕಾರಿಯನ್ನು ನೇಮಕ ಮಾಡಲಾಗಿದೆ ಎಂದೂ, ವಿಚಾರಣಾಧಿಕಾರಿಯವರೇ ಅವರ ಹಂತದಲ್ಲಿ ಶಿಸ್ತು ಪ್ರಕರಣವನ್ನು ಇತ್ಯರ್ಥಪಡಿಸುವಂತೆ ಜಿಲ್ಲಾಧಿಕಾರಿಗಳು ದಿನಾಂಕ : 12–12–03ರಂದು ಆದೇಶ ಹೊರಡಿಸಿರುವುದರಿಂದಲೂ, ಕಡತವನ್ನು ಪೂರ್ಣವಾಗಿ ಪರಿಶೀಲಿಸದೇ ಸಲ್ಲಿಸಿರುವ ಕಡತ ಪರಿಶೀಲನಾ ವರದಿಯು ಯಾವ ಉದ್ದೇಶಕ್ಕಾಗಿ ಸಲ್ಲಿಸಲಾಗಿದೆ ಎಂಬುದು ಅಸ್ಪಷ್ಟವಾಗಿರುವುದರಿಂದಲೂ ಹಾಗೂ ಈ ವರದಿಯನ್ನು ಇತರೆಯವರ ಪ್ರಭಾವಕ್ಕೆ ಒಳಗಾಗಿ ಸಲ್ಲಿಸಲಾಗಿದೆ ಎಂಬ ಆಕ್ಷೇಪಣೆಯನ್ನು ತಿರಸ್ಕರಿಸಲು ಯಾವುದೇ ಸಕಾರಣಗಳು ಇಲ್ಲದಿರುವುದರಿಂದಲೂ ಮತ್ತು ಶಿಸ್ತು ಪ್ರಕರಣದ ದಿನಾಂಕ : 16–02–04ರ ಅಂತಿಮ ಆದೇಶಕ್ಕೆ ನಿಗಧಿತ ಅವಧಿಯೊಳಗೆ ಯಾವುದೇ ಆಕ್ಷೇಪಣೆ ಬಾರದಿರುವುದರಿಂದಲೂ ಆರೋಪಿತರ ವಿರುದ್ಧದ ಆರೋಪಗಳು ಸಾಬೀತಾಗಿರುವುದಿಲ್ಲವೆಂದು ವರದಿ ನೀಡಿರುತ್ತಾರೆ.

ವಿಚಾರಣಾ ವರದಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಸರ್ಕಾರವು, ಶ್ರೀ ಎನ್.ಎಂ. ನೀಲಕಂಠ, ಕೆಎಸ್ (ಕಿರಿಯ ಶ್ರೇಣಿ), ಶ್ರೀ ಎನ್. ಪುಟ್ಟಸ್ವಾಮಿ, ಶ್ರೀ ಕೆ.ಎಂ. ಶಂಕರಯ್ಯ ಮತ್ತು ಶ್ರೀ ಎಸ್. ಮಹದೇವಯ್ಯ ರವರುಗಳ ವಿರುದ್ಧದ ಆರೋಪಗಳು ಸಾಬೀತಾಗಿಲ್ಲವೆಂದು ತಿಳಿಸಿರುವ ವರದಿಯನ್ನು ಅಂಗೀಕರಿಸಲು ನಿರ್ಣಯಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 040 ಕೆಇವಿ 07, ಬೆಂಗಳೂರು, ದಿನಾಂಕ : 19–04–2010**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ, ಸರ್ಕಾರವು ಶ್ರೀ ಎನ್.ಎಂ. ನೀಲಕಂಠ, ಕೆಎಎಸ್ (ಕಿರಿಯ ಶ್ರೇಣಿ), ಹಿಂದಿನ ಕೇಂದ್ರ ಸ್ಥಾನಿಕ ಸಹಾಯಕರು, (ಪ್ರಸ್ತುತ ವಿಶೇಷ ಭೂಸ್ವಾಧೀನಾಧಿಕಾರಿ, ಬೆಂಗಳೂರು ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿರುವ), ಶ್ರೀ ಎನ್. ಪುಟ್ಟಸ್ವಾಮಿ, ಹಿಂದಿನ ಪುರಸಭಾ ತಹಶೀಲ್ದಾರ್, ಶ್ರೀ ಕೆ. ಎಂ. ಶಂಕರಯ್ಯ, ಹಿಂದಿನ ಶಿರಸ್ತೇದಾರರು ಮತ್ತು ಶ್ರೀ ಎಸ್. ಮಹದೇವಯ್ಯ, ಹಿಂದಿನ ಪ್ರಥಮ ದರ್ಜೆ ಸಹಾಯಕರು, ಜಿಲ್ಲಾಧಿಕಾರಿಗಳ ಕಛೇರಿ, ಚಾಮರಾಜನಗರ ಜಿಲ್ಲೆ, ಚಾಮರಾಜನಗರ ಇವರಿಗೆ ಇನ್ನು ಮುಂದೆ ಸರ್ಕಾರಿ ಕೆಲಸದ ಕಾರ್ಯನಿರ್ವಹಣೆಯಲ್ಲಿ ಹೆಚ್ಚಿನ ಜಾಗರೂಕತೆಯಿಂದ ಕರ್ತವ್ಯ ನಿರ್ವಹಿಸುವಂತೆ ಎಚ್ಚರಿಕೆ ನೀಡುತ್ತಾ, ಇವರುಗಳನ್ನು ಪ್ರಸ್ತಾವನೆಯಲ್ಲಿ ವಿವರಿಸಿರುವ ಆರೋಪಗಳಿಂದ ದೋಷಮುಕ್ತಗೊಳಿಸಿ ಆದೇಶಿಸಿದೆ.

ಈ ಇಲಾಖಾ ವಿಚಾರಣೆ ನಡೆಯದಿದ್ದಲ್ಲಿ ಶ್ರೀಯುತರು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1113

**ಹೆಚ್. ಆರ್. ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಆಸುಇ (ಸೇವೆಗಳು–2)

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ವಿಷಯ :** ಶ್ರೀ ಮೋಹನ್ ಜೆ. ಕೌಜಲಗಿ, ನಿವೃತ್ತ ಸರ್ಕಾರದ ಉಪ ಕಾರ್ಯದರ್ಶಿ, 3ನೇ ಹಣಕಾಸು ಆಯೋಗದ ಶಿಫಾರಸ್ಸುಗಳ ಅನುಷ್ಠಾನ ಕಾರ್ಯಪಡೆಯ ಅಧ್ಯಕ್ಷರ ಆಪ್ತ ಕಾರ್ಯದರ್ಶಿ ಇವರ ವೇತನ ನಿಗಧಿಪಡಿಸುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 72 ಶಿಸನೇ 2010, ದಿನಾಂಕ : 09–03–2010.
2. 3ನೇ ಹಣಕಾಸು ಆಯೋಗದ ಶಿಫಾರಸ್ಸುಗಳ ಅನುಷ್ಠಾನ ಕಾರ್ಯಪಡೆಯ ಅಧ್ಯಕ್ಷರ ಆಪ್ತ ಕಾರ್ಯದರ್ಶಿ ಪತ್ರ ದಿನಾಂಕ : 12–03–2010.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶಗಳಲ್ಲಿ ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಾವಳಿ 1977ರ ನಿಯಮ 15(11) ಬಿ(4) ಪ್ರಕಾರ ಶ್ರೀ ಮೋಹನ್ ಜೆ. ಕೌಜಲಗಿ, ಉಪ ಕಾರ್ಯದರ್ಶಿ (ನಿವೃತ್ತ) ಇವರನ್ನು ಒಪ್ಪಂದದ ಮೇರೆಗೆ ದಿನಾಂಕ : 09–07–2009 ರಿಂದ ಜಾರಿಗೆ ಬರುವಂತೆ 3ನೇ ರಾಜ್ಯ ಹಣಕಾಸು ಆಯೋಗವು ಪಂಚಾಯತ್ ರಾಜ್ ಸಂಸ್ಥೆಗಳು ಹಾಗೂ ನಗರ ಸ್ಥಳೀಯ ಸಂಸ್ಥೆಗಳನ್ನು ಬಲಪಡಿಸಲು ನೀಡಿರುವ ಶಿಫಾರಸ್ಸುಗಳ ಅನುಷ್ಠಾನ ಕಾರ್ಯಪಡೆಯ ಅಧ್ಯಕ್ಷರ ಆಪ್ತ ಕಾರ್ಯದರ್ಶಿಯಾಗಿ ನೇಮಕ ಮಾಡಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ಶ್ರೀ ಮೋಹನ್ ಜೆ. ಕೌಜಲಗಿ ಇವರು ಅವರ ನಿವೃತ್ತಿ ಉಪದಾನಕ್ಕೆ ಸಂಬಂಧಿಸಿದ ದಾಖಲೆಗಳನ್ನು ಲಗತ್ತಿಸುತ್ತಾ, ಅವರ ವೇತನವನ್ನು ನಿಗಧಿಪಡಿಸಿ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಮೇಲ್ಕಂಡ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 5 ಶಿಸನೇ 2010, ಬೆಂಗಳೂರು, ದಿನಾಂಕ 21-04-2010

ಮೇಲ್ಕಾಣಿಸಿದ ವಿವರಗಳ ಹಿನ್ನೆಲೆಯಲ್ಲಿ ಶ್ರೀ ಮೋಹನ್ ಜೆ. ಕೌಜಲಗಿ, ಇವರ ವೇತನವನ್ನು ರೂ. 11,018/- ಗಳಿಗೆ ನಿಗಧಿಪಡಿಸಲಾಗಿದೆ. ಈ ವೇತನದೊಂದಿಗೆ ಶ್ರೀಯುತರ ಮೂಲ ವೇತನವಾದ ರೂ. 25,050/- ಗಳಿಗೆ ಲಭ್ಯವಾಗುವ ತುಟ್ಟಿಭತ್ಯೆ, ಮನೆ ಬಾಡಿಗೆ ಭತ್ಯೆ, ನಗರ ಪರಿಹಾರ ಭತ್ಯೆಗಳನ್ನು ಪಡೆಯಬಹುದು. ಆದರೆ ನಿವೃತ್ತಿ ವೇತನದ ಮೇಲಿನ ತುಟ್ಟಿ ಭತ್ಯೆಯನ್ನು ಪಡೆಯುವಂತಿಲ್ಲ, ನಿವೃತ್ತಿ ನಂತರದ ಸೇವೆಯನ್ನು ಅರ್ಹದಾಯಕ ಸೇವೆಯೆಂದು ಪರಿಗಣಿಸುವಂತಿಲ್ಲ.

2. ಶ್ರೀಯುತರ ನೇಮಕಾತಿಯು ಈ ಆದೇಶದ ಅನುಬಂಧದಲ್ಲಿನ ಷರತ್ತು ಮತ್ತು ನಿಬಂಧನೆಗಳಿಗೆ ಒಳಪಟ್ಟಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1114

**ಎಸ್. ತಿಪ್ಪೇಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಆಸುಇ ಇಲಾಖೆ (ರಾಜ್ಯ ಶಿಷ್ಟಾಚಾರ)

## HEALTH AND FAMILY SECRETARIAT

**Sub :** Deputation of Officers for training course on Hospital Management and for exposure to Hospital Management abroad – reg.

**Read :** 1. D.O. Letter No. TRG.CR160/2009-10, dated 22-12-2009 from the Director General, ATI, Mysore.

**Preamble :-**

In the letter read above, the Director General, Administrative Training Institute, Mysore has forwarded to the Chief Secretary, Government of Karnataka, details of the training course on Hospital Management, Thailand which includes field visits to local health institutions to expose the participants to parties in Hospital Management in that country, for perusal and consideration of the Government.

Accordingly, the matter was examined and it was considered that exposure of the officers of the department who are connected with hospital administration, to hospital management practices in hospitals abroad alongwith relevant training, would greatly elevate their competence, resulting in innovative measures to improve service delivery across the Government healthcare institutions in the State. After following the formalities it is decided that the proposal of Asian Institute of Technology, Thailand meets the requirements with a training programme of five days with content including modern management concepts, strategic planning for organizational change, financial management information systems, strategic human resource management, client oriented tertiary healthcare service, case studies, study visits etc.

Quotations were called from reputed firms to handle a) international air travel including visa processing etc., and b) services of accommodation, food and local visits. After evaluation, Spacove Company Limited, Bangkok has quoted the lowest fee for the above.

The estimated expenditure for a batch of 30 participants is as follows :

| Sl. No. | Organisation Name | Particulars | Cost (in US Dollars) | Cost (in Rupees) |
|---|---|---|---|---|
| 1 | AIT, Thailand | Course fee (at USD 600 per participant) | USD 18,000 | 8,28,000 |
| 2 | Spacove Company Ltd., Bangkok | International Air Travel (at USD 420 per participant) | USD 12,600 | 5,79,600 |
| 3 | Spacove Company Ltd., Bangkok | Board and Accomodation (at USD 426 per participant) | USD 12,780 | 5,87,880 |
| | **Total** | | **USD 43,380** | **INR 19,95,480** |

As the training course would be extremely beneficial to the hospital managers of all levels and would result in enhancement of service delivery quality especially at the district and taluk level hospitals, initially it is decided to depute ninety participants in three batches of thirty each for the training at an estimated expenditure of Rs. 5986440/- (rupees fifty nine lakhs eighty six thousand four hundred and forty only) (1995480 per batch of thirty x 3).

The proposal has been approved by the Chief Secretary to Government and Chairman of the Governing Board of the Project subject to ratification of the Governing Board.

Hence, the following order.

**Government Order No. HFW/KHSDRP/OD/HM/48/09-10, Bangalore, Dated : 26-04-2010**

Under the circumstances mentioned in the preamble, Government have accorded approval for deputing ninety officers in three batches of thirty each to undergo training course in Hospital Management at Asian Institute of Technology, Bangkok with the following expenditure.

| Sl. No. | Organisation Name | Particulars | Cost (in US Dollars) | Cost (in Indian Rupees) |
|---|---|---|---|---|
| 1 | AIT, Thailand | Course fee (at USD 600 per participant) | USD 18,000 | 8,28,000 |
| 2 | Spacove Company Ltd., Bangkok | International Air Travel (at USD 420 per participant) | USD 12,600 | 5,79,600 |
| 3 | Spacove Company Ltd., Bangkok | Board and Accomodation (at USD 426 per participant) | USD 12,780 | 5,87,880 |
| | **Total per batch** | | **USD 43,380** | **INR 19,95,480** |

Total expenditure for three batches is Rs. 5986440/- (rupees fifty nine lakhs eighty six thousand four hundred and forty only)

The above expenditure shall be debited to the Head of Account "2210-06-800-0-81-015" (Subsidiary Expenses) for the financial year 2010-11.

By Order and in the name of the Governor of Karnataka

**M. Shashidar**
Deputy Secretary to Government
KHSDRP
Health and Family Welfare Department

PR NO. 1115

**ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ**

**ವಿಷಯ :** **ದಾವಣಗೆರೆ ಜಿಲ್ಲೆಯಲ್ಲಿ ಗ್ರಾಮೀಣ ಸ್ವಯಂ ಉದ್ಯೋಗ ತರಬೇತಿ (ಆರ್–ಸೆಟಿ) ಸಂಸ್ಥೆ ಸ್ಥಾಪನೆಗಾಗಿ ನಿವೇಶನವನ್ನು ಹಸ್ತಾಂತರಿಸುವ ಬಗ್ಗೆ.**

**ಓದಲಾಗಿದೆ :**
1. ಕೇಂದ್ರ ಸರ್ಕಾರದ ಪತ್ರದ ಸಂಖ್ಯೆ : 1. 12011/19/2008–ಎಸ್‌ಜಿಎಸ್‌ವೈ (ಸಿ), ದಿನಾಂಕ : 07–01–2009
2. ರಾಜ್ಯ ಸರ್ಕಾರದ ಪತ್ರದ ಸಂಖ್ಯೆ : ಗ್ರಾಅಪ 130 ಎಸ್‌ಜೆವೈ (ಇನ್‌ಫ್ರಾ) 09, ದಿನಾಂಕ : 02–02–2009, 17–12–2009
3. ಕೇಂದ್ರ ಸರ್ಕಾರದ ಅ.ಸ. ಪತ್ರದ ಸಂಖ್ಯೆ : 1. 12011/19/2008–ಎಸ್‌ಜಿಎಸ್‌ವೈ (ಟ್ರೈನಿಂಗ್), ದಿನಾಂಕ : 15–10–2009
4. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್, ದಾವಣಗೆರೆ ಇವರ ಪತ್ರ ಸಂಖ್ಯೆ : ಜಿಪಂದಾ : ಅಬಿ : 03 : ಇವಿಸಿಆರ್ : 09–10, ದಿನಾಂಕ : 05–12–2009.
5. ಸರ್ಕಾರದ ಆದೇಶ ಸಂಖ್ಯೆ : ವಾಕೈ 32 ರೇಯೋವಿ 2009, ಬೆಂಗಳೂರು, ದಿನಾಂಕ : 31–12–2009ರ ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆಯ ನಡವಳಿ.
6. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್, ದಾವಣಗೆರೆ ಇವರ ಪತ್ರ ಸಂಖ್ಯೆ : ಜಿಪಂದಾ : ಎಸ್.ಜಿ.ಎಸ್.ವೈ. ಆ 2009–10, ದಿನಾಂಕ : 25–02–2010.

**ಪ್ರಸ್ತಾವನೆ :**

ರಾಷ್ಟ್ರದ ಎಲ್ಲಾ ಜಿಲ್ಲೆಗಳಲ್ಲಿ ಗ್ರಾಮೀಣ ಸ್ವಯಂ ಉದ್ಯೋಗ ತರಬೇತಿ ಕೇಂದ್ರವನ್ನು (R-SETI) ಲೀಡ್ ಬ್ಯಾಂಕ್‌ಗಳ ಮುಖಾಂತರ ಸ್ಥಾಪಿಸಲು ಕೇಂದ್ರ ಸರ್ಕಾರದ ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಓದಲಾಗಿದೆ (1)ರ ಪತ್ರದ ದಿನಾಂಕ : 07–01–2009ರ ಮಾರ್ಗಸೂಚಿಯಲ್ಲಿ ತಿಳಿಸಿರುತ್ತದೆ. ಇದರನ್ವಯ ರಾಜ್ಯ ಸರ್ಕಾರವು R-SETI ಸ್ಥಾಪನೆಗಾಗಿ ಉಚಿತವಾಗಿ ನಿವೇಶನ ಅಥವಾ 33 ವರ್ಷಗಳ ಅವಧಿಗೆ ಗುತ್ತಿಗೆ ಆಧಾರದ ಮೇಲೆ ಜಮೀನು ಒದಗಿಸಬೇಕಾಗಿರುತ್ತದೆ. ಕೇಂದ್ರ ಸರ್ಕಾರವು R-SETI ಕಟ್ಟಡ ನಿರ್ಮಾಣ, ಪೀಠೋಪಕರಣ ಮತ್ತು ಯಂತ್ರೋಪಕರಣಗಳಿಗಾಗಿ ರೂ. 1.00 ಕೋಟಿ ಅನುದಾನವನ್ನು ನೀಡುತ್ತದೆ.

ಕೇಂದ್ರ ಸರ್ಕಾರದ ಆದೇಶದನ್ವಯ ಓದಲಾಗಿದೆ (2)ರ ದಿನಾಂಕ : 02–02–2009 ಪತ್ರದಲ್ಲಿ R-SETI ಯನ್ನು ದಾವಣಗೆರೆ ಜಿಲ್ಲೆಯಲ್ಲಿ ಸ್ಥಾಪಿಸಲು ಉಚಿತವಾಗಿ ನಿವೇಶನ ಅಥವಾ ಜಮೀನು ಒದಗಿಸುವಂತೆ, ಸರ್ಕಾರಿ ನಿವೇಶನ ಸಿಗದಿದ್ದಲ್ಲಿ ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಯ ಅನುದಾನದಿಂದಾಗಲಿ ಅಥವಾ ಕೈಗಾರಿಕಾ ಪ್ರದೇಶಗಳಲ್ಲಾಗಲಿ ನಿವೇಶನ ಒದಗಿಸುವಂತೆ ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆಯ ಪ್ರಧಾನ ಕಾರ್ಯದರ್ಶಿಗಳನ್ನು ಕೋರಲಾಗಿತ್ತು.

ಕೇಂದ್ರ ಸರ್ಕಾರವು ಓದಲಾಗಿದೆ (3)ರ ದಿನಾಂಕ : 15–10–2009ರಲ್ಲಿ ರಾಜ್ಯ ಸರ್ಕಾರಗಳು R-SETI ಸ್ಥಾಪನೆಗಾಗಿ ದಿನಾಂಕ : 31–12–2009 ರೊಳಗಾಗಿ ನಿವೇಶನ ನೀಡಲು ಸೂಚಿಸಿದನ್ವಯ ಓದಲಾಗಿದೆ (2)ರ ದಿನಾಂಕ :

17-12-2009ರಲ್ಲಿ ಜಮೀನನ್ನು ಉಚಿತವಾಗಿ ಅಥವಾ 33 ವರ್ಷಗಳ ಅವಧಿಗೆ ಗುತ್ತಿಗೆ ಮೇಲೆ ನೀಡುವಂತೆ ಮತ್ತೊಮ್ಮೆ ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಯ ಪ್ರಧಾನ ಕಾರ್ಯದರ್ಶಿಗಳನ್ನು ಕೋರಲಾಗಿತ್ತು.

ಓದಲಾಗಿದೆ (4)ರ ದಿನಾಂಕ : 05-12-2009ರ ಪತ್ರದಲ್ಲಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್ ದಾವಣಗೆರೆ ಇವರು ದಾವಣಗೆರೆ ತಾಲ್ಲೂಕಿನ ತೋಳಹುಣಸೆಯಲ್ಲಿರುವ ರೇಷ್ಮೆ ತರಬೇತಿ ಸಂಸ್ಥೆಗೆ 2 ಎಕರೆ ಜಮೀನನ್ನು ರೂಡ್‌ಸೆಟಿ ಸಂಸ್ಥೆ, ಕೆನರಾ ಬ್ಯಾಂಕ್ ಇವರಿಗೆ ತರಬೇತಿ ಕೇಂದ್ರವನ್ನು ಸ್ಥಾಪಿಸಲು 33 ವರ್ಷಗಳಿಗೆ ಗುತ್ತಿಗೆ ಆಧಾರದ ಮೇಲೆ ಹಂಚಿಕೆ ಮಾಡಲು ಮಾನ್ಯ ಆಯುಕ್ತರು, ರೇಷ್ಮೆ ಇಲಾಖೆ, ಬೆಂಗಳೂರು ಇವರನ್ನು ಕೋರಿರುತ್ತಾರೆ. ಓದಲಾಗಿದೆ (5)ರ ದಿನಾಂಕ 31-12-2009ರ ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಯ ಆದೇಶದಂತೆ, ತೋಳಹುಣಸೆಯಲ್ಲಿರುವ ರೇಷ್ಮೆ ತರಬೇತಿ ಸಂಸ್ಥೆಯ ವ್ಯಾಪ್ತಿಯಲ್ಲಿರುವ ನಂ. 57 ರಲ್ಲಿರುವ 20 ಎಕರೆ ಜಮೀನಿನ ಪೈಕಿ 2 ಎಕರೆ ಜಮೀನನ್ನು 33 ವರ್ಷಗಳ ಅವಧಿಗೆ ಗುತ್ತಿಗೆ ಮೇಲೆ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಗೆ ನೀಡುವುದಕ್ಕೆ ಮಂಜೂರಾತಿ ನೀಡಿದೆ. ಓದಲಾಗಿದೆ (6)ರ ದಿನಾಂಕ : 25-02-2010ರ ಪತ್ರದಂತೆ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್, ದಾವಣಗೆರೆ ಇವರು ಮೇಲ್ಕಂಡ ಜಮೀನನ್ನು ಹಸ್ತಾಂತರಿಸಿಕೊಂಡಿರುತ್ತಾರೆ. ಈ ಜಮೀನನ್ನು ಗ್ರಾಮೀಣಾಭಿವೃದ್ಧಿ ಮಂತ್ರಾಲಯ, ಕೇಂದ್ರ ಸರ್ಕಾರದ ಸೂಚನೆಯಂತೆ ಗ್ರಾಮೀಣ ಸ್ವಯಂ ಉದ್ಯೋಗ ತರಬೇತಿ ಸಂಸ್ಥೆ ಸ್ಥಾಪಿಸಲು ಕೆನರಾ ಬ್ಯಾಂಕ್ ರೂರಲ್ ಡೆವಲಪ್‌ಮೆಂಟ್ ಟ್ರಸ್ಟ್‌ಗೆ 33 ವರ್ಷಗಳ ಗುತ್ತಿಗೆ ಆಧಾರದ ಮೇಲೆ ನೀಡಬೇಕಿದೆ. ಆದುದರಿಂದ ಈ ಆದೇಶ .

**ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 2 ಎಸ್‌ಇಪಿ (ಇತರೆ) 2010, ಬೆಂಗಳೂರು, ದಿನಾಂಕ : 12-03-2010**

ಭಾರತ ಸರ್ಕಾರದ ಗ್ರಾಮೀಣಾಭಿವೃದ್ಧಿ ಮಂತ್ರಾಲಯ ಮಾರ್ಗಸೂಚಿಯನ್ವಯ ದಾವಣಗೆರೆ ಜಿಲ್ಲೆಯಲ್ಲಿ ಗ್ರಾಮೀಣ ಸ್ವಯಂ ಉದ್ಯೋಗ ತರಬೇತಿ ಕೇಂದ್ರವನ್ನು ಸ್ಥಾಪಿಸುವುದಕ್ಕೆ ದಾವಣಗೆರೆ ಜಿಲ್ಲಾ ಪಂಚಾಯತ್ ವಶದಲ್ಲಿರುವ ಸರ್ವೆ ನಂ. 57ರಲ್ಲಿರುವ 20 ಎಕರೆ ಜಮೀನಿನ ಪೈಕಿ 2 ಎಕರೆ ಜಮೀನನ್ನು ಕೆನರಾ ಬ್ಯಾಂಕ್ ರೂರಲ್ ಡೆವಲಪ್‌ಮೆಂಟ್ ಟ್ರಸ್ಟ್, ಬೆಂಗಳೂರು ಇವರಿಗೆ 33 ವರ್ಷಗಳ ಅವಧಿಗೆ ಗುತ್ತಿಗೆ ಆಧಾರದ ಮೇಲೆ ಹಸ್ತಾಂತರಿಸಲು ಈ ಕೆಳಕಂಡ ಷರತ್ತು ನಿಬಂಧನೆಗಳೊಂದಿಗೆ ಮಂಜೂರಾತಿ ನೀಡಿದೆ.

1. ಗ್ರಾಮೀಣಾಭಿವೃದ್ಧಿ ಮಂತ್ರಾಲಯ, ಭಾರತ ಸರ್ಕಾರ, ನವದೆಹಲಿ ಇವರ ನಿರ್ದೇಶನದಂತೆ ಗುತ್ತಿಗೆ ಪಡೆದ ಜಮೀನಿನಲ್ಲಿ ದಾವಣಗೆರೆ ಜಿಲ್ಲೆಗೆ ಸಂಬಂಧಪಟ್ಟಂತೆ ಗ್ರಾಮೀಣ ಸ್ವಯಂ ಉದ್ಯೋಗ ತರಬೇತಿ ಕೇಂದ್ರವನ್ನು ಸ್ಥಾಪಿಸಬೇಕು ಹಾಗೂ ನಡೆಸಬೇಕು.
2. ಜಮೀನನ್ನು ಯಾವ ಉದ್ದೇಶಕ್ಕಾಗಿ ಪಡೆದಿದೆಯೋ, ಆ ಉದ್ದೇಶಕ್ಕಾಗಿ ಮಾತ್ರ ಉಪಯೋಗಿಸತಕ್ಕದ್ದು ತಪ್ಪಿದಲ್ಲಿ ಜಮೀನನ್ನು ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಗೆ ಮರು ವರ್ಗಾಯಿಸತಕ್ಕದ್ದು.
3. ಜಮೀನಿನ ಯಾವುದೇ ಭಾಗವನ್ನು ಮಾರಾಟ ಮಾಡುವ ಅಥವಾ ಬಾಡಿಗೆ/ಗುತ್ತಿಗೆ ನೀಡುವ ಅಧಿಕಾರವಿರುವುದಿಲ್ಲ ಈ ರೀತಿ ಮಾಡಿದಲ್ಲಿ ಜಮೀನನ್ನು ಹಿಂದಕ್ಕೆ ಪಡೆಯಲಾಗುವುದು.
4. ಪಡೆದ ಜಮೀನನ್ನು ಒತ್ತುವರಿಯಾಗದಂತೆ ಎಚ್ಚರಿಕೆ ವಹಿಸುವ ಜವಾಬ್ದಾರಿ ಕೆನರಾ ಬ್ಯಾಂಕ್ ಗ್ರಾಮೀಣ ಸ್ವಯಂ ಉದ್ಯೋಗ ತರಬೇತಿ ಸಂಸ್ಥೆ, ದಾವಣಗೆರೆ ಇವರದ್ದಾಗಿರುತ್ತದೆ.
5. ಜಮೀನನ್ನು ಯಾವುದೇ ಕಾರಣದಿಂದ ಸಾಲ ಪಡೆಯಲು ಸಂಸ್ಥೆಯು ಬ್ಯಾಂಕುಗಳ/ಹಣಕಾಸು ಸಂಸ್ಥೆಗಳಿಗೆ ಒತ್ತೆ ಇಡಲು ಅವಕಾಶವಿರುವುದಿಲ್ಲ.
6.

ಪಿ.ಆರ್. 1116

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪಿ.ಎ. ಮೇಘಣ್ಣವರ**
ನಿರ್ದೇಶಕರು (ಸ್ವ.ಉ.ಕಾ.) ಹಾಗೂ ಪ.ನಿ.
ಸರ್ಕಾರದ ಜಂಟಿ ಕಾರ್ಯದರ್ಶಿ
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

## ಸುತ್ತೋಲೆ

**ಸಂಖ್ಯೆ : ಸಿಆಸುಇ 15 ಸೇಇವಿ 2010 ಬೆಂಗಳೂರು, ದಿನಾಂಕ 27ನೇ ಏಪ್ರಿಲ್ 2010**

**ವಿಷಯ :** ಸರ್ಕಾರಿ ನೌಕರರ ಅಮಾನತ್ತನ್ನು ತೆರವುಗೊಳಿಸಿ ಅವರನ್ನು ಸೇವೆಗೆ ಪುನಃ ಸ್ಥಾಪಿಸುವ ಬಗ್ಗೆ.

ಕರ್ನಾಟಕ ಲೋಕಾಯುಕ್ತದ ಪೊಲೀಸು ವಿಭಾಗವು ಘೋಷಿತ ಆಸ್ತಿಗಿಂತ ಹೆಚ್ಚಿನ ಆಸ್ತಿಯನ್ನು ಹೊಂದಿರುವ ಸರ್ಕಾರಿ ನೌಕರರ ಪ್ರಕರಣಗಳ ಬಗ್ಗೆ ಭ್ರಷ್ಟಾಚಾರ ತಡೆ ಅಧಿನಿಯಮ 1988ರ ಅಡಿಯಲ್ಲಿ ತನಿಖೆ ನಡೆಸುತ್ತದೆ. ಹೀಗೆ ತನಿಖೆ ನಡೆಸಿ ಮೇಲ್ನೋಟಕ್ಕೆ ಸರ್ಕಾರಿ ನೌಕರರು ತಪ್ಪಿತಸ್ಥರೆಂದು ಕಂಡುಬಂದಾಗ ತನಿಖೆಯು ಸುಸೂತ್ರವಾಗಿ ನಡೆಯಬೇಕೆಂಬ ಉದ್ದೇಶದಿಂದ ಸಂಬಂಧಿತ ಸರ್ಕಾರಿ ನೌಕರರನ್ನು ಅಮಾನತ್ತಿನಲ್ಲಿರಿಸಲು ಲೋಕಾಯುಕ್ತ ಪೊಲೀಸು ವಿಭಾಗವು ಸಕ್ಷಮ ಪ್ರಾಧಿಕಾರಕ್ಕೆ ಶಿಫಾರಸು ಮಾಡುತ್ತದೆ. ಅದೇ ರೀತಿಯಲ್ಲಿ ಅಕ್ರಮ ಸಂಭಾವನೆ ಪಡೆಯುತ್ತಿರುವಂತಹ ಸರ್ಕಾರಿ ನೌಕರರನ್ನು ಲೋಕಾಯುಕ್ತ ಪೊಲೀಸರು ಟ್ರ್ಯಾಪ್ ಮಾಡಿ ಅವರನ್ನು ಅಮಾನತ್ತಿನಲ್ಲಿರಿಸಲು ಸಕ್ಷಮ ಪ್ರಾಧಿಕಾರಕ್ಕೆ ಶಿಫಾರಸು ಮಾಡುತ್ತಾರೆ. ಇಂತಹ ಪ್ರಕರಣಗಳಲ್ಲಿ ಸಂಬಂಧಿತ ನೌಕರರನ್ನು ಅಮಾನತ್ತಿನಲ್ಲಿರಿಸಲಾಗುತ್ತದೆ. ಆದರೆ ಸ್ವಲ್ಪ ಸಮಯದ ನಂತರ ಅಮಾನತ್ತನ್ನು ತೆರವುಗೊಳಿಸಿ, ಸಂಬಂಧಿತ ನೌಕರರನ್ನು ಅದೇ ಹುದ್ದೆಯಲ್ಲಿ ಸೇವೆಗೆ ಪುನಃ ಸ್ಥಾಪಿಸಿದ ಕೆಲವು ಪ್ರಕರಣಗಳು ಸರ್ಕಾರದ ಗಮನಕ್ಕೆ ಬಂದಿವೆ.

ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಯ ಪ್ರಕಾರ ಯಾವ ಪ್ರಾಧಿಕಾರವು ಸರ್ಕಾರಿ ನೌಕರರನ್ನು ಅಮಾನತ್ತಿನಲ್ಲಿರಿಸಲು ಅಧಿಕಾರವನ್ನು ಹೊಂದಿದೆಯೋ, ಅದೇ ಪ್ರಾಧಿಕಾರವು ಸರ್ಕಾರಿ ನೌಕರರನ್ನು ಸೇವೆಯಲ್ಲಿ ಪುನಃ ಸ್ಥಾಪಿಸಲು ಸಹ ಅಧಿಕಾರವನ್ನು ಹೊಂದಿರುತ್ತದೆ. ಭ್ರಷ್ಟಾಚಾರ ತಡೆ ಅಧಿನಿಯಮ 1988ರ ಅಡಿಯಲ್ಲಿ ಲೋಕಾಯುಕ್ತ ಪೊಲೀಸು ವಿಭಾಗವು ಟ್ರ್ಯಾಪ್ ಅಥವಾ ದಾಳಿಗೊಳಗಾದ ಸರ್ಕಾರಿ ನೌಕರರನ್ನು ಅಮಾನತ್ತಿನಲ್ಲಿರಿಸಲು ಶಿಫಾರಸು ಮಾಡಿದಾಗ ಸಂಬಂಧಿತ ಸರ್ಕಾರಿ ನೌಕರರನ್ನು ಸಕ್ಷಮ ಪ್ರಾಧಿಕಾರದ ವಿವೇಚನೆಗೊಳಪಟ್ಟು ಅಮಾನತ್ತಿನಲ್ಲಿರಿಸಬಹುದು. ಅಂತಹ ಪ್ರಕರಣಗಳಲ್ಲಿ ಲೋಕಾಯುಕ್ತ ಪೊಲೀಸು ವಿಭಾಗದಿಂದ ತನಿಖೆಯು ನಡೆಯುತ್ತಿರುವಾಗ ಸಂಬಂಧಿತ ನೌಕರರ ಅಮಾನತ್ತನ್ನು ತೆರವುಗೊಳಿಸಿ ಅವರನ್ನು ಸೇವೆಗೆ ಪುನಃ ಸ್ಥಾಪಿಸಲು ಸಕ್ಷಮ ಪ್ರಾಧಿಕಾರವು ತೀರ್ಮಾನಿಸಿದಲ್ಲಿ ಅವರನ್ನು ಯಾವ ಹುದ್ದೆಯಿಂದ ಅಮಾನತ್ತಿನಲ್ಲಿರಿಸಲಾಗಿತ್ತೋ ಅದೇ ಹುದ್ದೆಗೆ ಪುನಃ ಸ್ಥಾಪಿಸುವುದು ಲೋಕಾಯುಕ್ತ ಪೊಲೀಸು ವಿಭಾಗವು ನಡೆಸುವ ತನಿಖೆಯ ದೃಷ್ಟಿಯಿಂದ ಸೂಕ್ತವಲ್ಲವೆಂಬ ಅಂಶವನ್ನು ಎಲ್ಲ ಸಕ್ಷಮ ಪ್ರಾಧಿಕಾರಗಳ ಗಮನಕ್ಕೆ ಈ ಮೂಲಕ ತರಲಾಗಿದೆ.

**ಎಸ್. ವಿ. ರಂಗನಾಥ್**

ಪಿ.ಆರ್.1224

ಸರ್ಕಾರದ ಮುಖ್ಯ ಕಾರ್ಯದರ್ಶಿ,

## COMMERCE & INDUSTRIES SECRETARIAT

**Sub :** Approval to the Project Proposal of M/s. Tokai Rubber Auto-Parts India Pvt. Ltd., to establish a unit for manufacture of Rubber Products/Automotive Ancillary Components at Phase II of Harohalli Industrial Area, Kanakapura Taluk, Ramanagara District.

**Read :**

1. Proceedings of the 21st State High Level Clearance Committee (SHLCC) meeting held on 29-03-2010.
2. Govt. Order No. CI 156 SPI 2010, dated 28-04-2010.
3. Meeting of the officials of M/s. Tokai Rubber Auto-Parts India Pvt. Ltd. with Principal Secretary to Govt., C & I on 05-05-2010.

**Preamble:**

M/s Tokai Rubber Auto-Parts India Pvt. Ltd., had proposed to establish a unit for manufacture of Rubber Products/Automotive Ancillary Components at Phase II of Harohalli Industrial Area, Kanakapura Taluk, Ramanagara District, with an investment of Rs. 63 crores, generating employment to about 186 persons.

In the 21st State High Level Clearance Committee (SHLCC) meeting held on 29-03-2010, the proposal of the Company was approved and Govt. Order read at (2) above has been issued.

M/s Tokai Rubber Auto-Parts India Pvt. Ltd., approached Principal Secretary to Govt., C & I on 05-05-2010 with their revised proposal for investing Rs. 103 crores at Phase II of Harohalli Industrial Area, Kanakapura Taluk, Ramanagara District and requested for allotment of atleast 10 acres of land for their project. Considering the importance of the products proposed to be manufactured, reputation of the company and urgency of sufficient land allotment, it is proposed to issue an amendment order.

Hence the following order.

**Government Order No. CI 156 SPI 2010, Bangalore, Dated 5th May 2010.**

Government is pleased to accord in principle approval to the project proposal of M/s Tokai Rubber Auto-Parts India Pvt. Ltd., to establish a unit for manufacture of Rubber Products/Automotive Ancillary Components at Phase II of Harohalli Industrial Area, Kanakapura Taluk, Ramanagara District, with an investment of Rs.103 crores, generating employment to about 186 persons and extend the following infrastructure facilities, incentives and concessions.

**INFRASTRUCTURE FACILITIES**:

1. **Land:** 10 acres of land in Phase-II of Harohalli Industrial Area, Kanakapura taluk, Ramanagara District.
2. **Power:** 2000 KVA to be serviced by BESCOM
3. **Water:** 104 KLD to be supplied by KIADB
4. **Incentives and Concessions:** As applicable under Industrial Policy of the State.

**GENERAL TERMS AND CONDITIONS :**

1. **MOU:** The project proponents will have to sign a MOU with the Government of Karnataka during the Global Investors Meet in June 2010.
2. **Environment :** The promoters to obtain CFE and CFO from KSPCB and environmental clearance from MOEF, GOI.
3. **Employment:** The Company shall prepare a plan for development of Human Resources required for the project, train local people and provide employment to these trained local youth and comply with the provisions of Industrial Policy of Govt. of Karnataka. A copy of Human Resources Development plan shall be sent to the Commissioner for I.D. & Director of Industries and Commerce for monitoring.
4. **Vendor Development:** Wherever there is scope for vendor development for the project, the company shall prepare a vendor development plan, develop local vendors and procure the required inputs, components and sub assemblies from these local vendor units. A copy of the vendor development plan shall be sent to the Commissioner for I.D. & Director of Industries and Commerce for monitoring.
5. **Social Infrastructure Development :** The Company is advised to take up social infrastructure development projects in the vicinity of the proposed location of the unit. A copy of such projects shall be sent to the Commissioner for I.D. & Director of Industries and Commerce for monitoring.
6. **Others:**

   a. The project proponents shall provide employment to atleast one member of the family of each land looser as the land is being acquired through KIADB.

b. The project proponents shall adopt rain water harvesting, waste water recycling and water conservation techniques. Zero discharge facility should be adopted wherever applicable.

c. The promoters shall take all statutory and other necessary clearances from the competent authorities including GOI and shall submit milestones/progress in implementation of the project regularly, which will be monitored by the Department.

**The Govt. Order CI 156 SPI 2010, dated : 28-04-2010 is withdrawn herewith.**

This approval is valid for a period of two years from the date of issue.

By Order and in the name of the Governor of Karnataka,

PR. 1225

**Aparna Pavate**
Desk Officer (Technical Cell)
Commerce & Industries Department.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀ ಜಿ. ವಿ. ನಾಯಕ್, ನಿವೃತ್ತ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಇವರ ವಿರುದ್ಧದ ಆರೋಪಗಳ ವಿಚಾರಣೆಯ ಅಂತಿಮ ಆದೇಶ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 133 ಎಸ್‌ಇಎನ್ 2005, ದಿನಾಂಕ : 22-06-2007.

2. ಅಪರ ಪ್ರಾದೇಶಿಕ ಆಯುಕ್ತರು ಗುಲ್ಬರ್ಗಾ ವಿಭಾಗ, ಗುಲ್ಬರ್ಗಾ ಹಾಗೂ ವಿಚಾರಣಾಧಿಕಾರಿಗಳು ಇವರ ಪತ್ರ ಸಂಖ್ಯೆ : ಕಂ/ಪ್ರಾಅಗು/ಶಿಸ್ತು/12/2009-10/308 ದಿನಾಂಕ : 14-09-2009.

**ಪ್ರಸ್ತಾವನೆ :**

ಶ್ರೀ ಜಿ. ವಿ. ನಾಯಕ್, ನಿವೃತ್ತ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಇವರು ಗುಲ್ಬರ್ಗಾದ ಸರ್ಕಾರಿ ಶಿಕ್ಷಕರ ಶಿಕ್ಷಣ ಮಹಾವಿದ್ಯಾಲಯದ ಪ್ರಾಂಶುಪಾಲರಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಸಿಬ್ಬಂದಿ ಮೇಲೆ ಸರಿಯಾದ ನಿಯಂತ್ರಣ ಹೊಂದದೆ ಹಣ ದುರುಪಯೋಗ ಪಡಿಸಿಕೊಳ್ಳಲು ಕಾರಣರಾದ, ಹಾಗೂ ಇತರ 2 ಆರೋಪಗಳಿಗಾಗಿ ಮೇಲೆ ಓದಲಾದ (1)ರ ದಿನಾಂಕ : 27-07-2007ರ ಸರ್ಕಾರಿ ಆದೇಶದಲ್ಲಿ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಆದೇಶಿಸಿ ಅಪರ ಪ್ರಾದೇಶಿಕ ಆಯುಕ್ತರು ಗುಲ್ಬರ್ಗಾ ವಿಭಾಗ, ಗುಲ್ಬರ್ಗಾ ಇವರನ್ನು ವಿಚಾರಣಾಧಿಕಾರಿಯಾಗಿ ನೇಮಿಸಲಾಗಿತ್ತು. ವಿಚಾರಣಾಧಿಕಾರಿಗಳು ಮೇಲೆ (2) ರಲ್ಲಿ ಓದಲಾದ ದಿನಾಂಕ: 14-09-2009ರ ವಿಚಾರಣಾ ವರದಿ ಸಲ್ಲಿಸಿದ್ದಾರೆ. ವಿಚಾರಣಾ ವರದಿಯನ್ನು ಪರಿಶೀಲಿಸಿದ ಸರ್ಕಾರವು ಪ್ರಕರಣವನ್ನು ಮುಕ್ತಾಯಗೊಳಿಸಲು ತೀರ್ಮಾನಿಸಿ ಮುಂದಿನಂತೆ ಆದೇಶಿಸಿರುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 25 ಎಸ್‌ಇಎನ್ 2005, ಬೆಂಗಳೂರು, ದಿನಾಂಕ: 05-05-2010.**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ ಸರ್ಕಾರವು ಶ್ರೀ ಜಿ. ವಿ. ನಾಯಕ್, ನಿವೃತ್ತ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಅವರನ್ನು ಪ್ರಸ್ತಾವನೆಯಲ್ಲಿ ವಿವರಿಸಿದ ಆರೋಪಗಳಿಂದ ಆರೋಪ ಮುಕ್ತರನ್ನಾಗಿಸುತ್ತದೆ.

ಈ ಇಲಾಖಾ ವಿಚಾರಣೆ ನಡೆಯದಿದ್ದಲ್ಲಿ ಶ್ರೀ ಜಿ. ವಿ. ನಾಯಕ್ ನಿವೃತ್ತ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಅವರು ಯಾವ ಸೌಲಭ್ಯಗಳನ್ನು ಪಡೆಯುತ್ತಿದ್ದರೋ, ಅವುಗಳನ್ನು ಪಡೆಯಲು ಅರ್ಹರಾಗಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1226

**ಎಚ್. ಆರ್. ನಾಗೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಸೇವೆಗಳು-3)